**UNIVERSITY OF BOMBAY**

ಮುಂಬಯಿ ವಿದ್ಯಾಶಾಲೆಯ ಎಸ್. ಎಸ್. ಎಲ್. ಸಿ. ಪರೀಕ್ಷೆಗೆ

೧೯೨೨ — ೨೩ ಕ್ಕೆ ನಿಯಮಿಸಿರುವ

**ಪದ್ಯಭಾಗವು**

---

# ಕನ್ನಡ ಭಾರತ

ದ್ರೋಣಪರ್ವ

ಸಂಧಿಗಳು

**೫—೭**

---

(ಲಘು ಟಿಪ್ಪಣದೊಡನೆ ಮುದ್ರಿಸಿದೆ)

---

**ಕರ್ಣಾಟಕ ಸಾಹಿತ್ಯ ಪರಿಷತ್ತು**

ಬೆಂಗಳೂರು

೧೯೨೨




*Sole Agents* :—**M. S. Rao & Company,**

**Publishers & Booksellers,**

***Avenue Road, Bangalore City.***

[ಬೆಲೆ ೮ ಆಣೆ]

ಫೀನಿಕ್ಸ್ ಪ್ರಿಂಟಿಂಗ್ ಹೌಸ್, ವಿಶ್ವೇಶ್ವರಪುರ, ಬಸವನಗುಡಿ, ಬೆಂಗಳೂರು.

ಮುಂಬಯಿ ವಿದ್ಯಾಖಾತೆಯ ಎಸ್. ಎಸ್. ಎಲ್. ಸಿ. ಪರೀಕ್ಷೆಗೆ

೧೯೨೨-೧೯೨೩ಕ್ಕೆ ನಿಯಮಿಸಿರುವ

**ಪ ದ್ಯ ಭಾ ಗ ವು**

---

# ಕನ್ನಡ ಭಾರತ

## ದ್ರೋಣ ಪರ್ವ



## ಐದನೆಯ ಸಂಧಿ

ಸೂ|| ರಾಯ ಕಟಕಾಚಾರ್ಯನುರು ಚಾ |
ಪಾಯುಧಾಗ್ರಣಿ ಮೋಹಿದನು ಪ |
ದ್ಮಾಯತ ವ್ಯೂಹವನು ಸೈನ್ಯದ ಜಾಣನಾ ದ್ರೋಣ ||

ನೀನು ಮಾಡಿದ ಸುಕೃತ ಫಲವದ |
ನೇನ ಹೇಳುವೆನಿತ್ತಲುಗ್ಗಡ |
ದಾನೆ ಬಿದ್ದುದು ಕಾದಿ ನಸು ಸೊಪ್ಪಾದುದರಿ ಸೇನೆ ||
ಧ್ಯಾನವಿತ್ತಲು ರಾಗವತ್ತಲು |
ಮೌನವಿತ್ತಲು ರಭಸವತ್ತಲು |
ಹಾನಿಯಿತ್ತಲು ವೃದ್ಧಿಯತ್ತಲು ಭೂಪ ಕೇಳೆಂದ ||೧||

---

ಸೂ|| ಕಟಕ-ಸೈನ್ಯ, ಪದ್ಮಾಯತ ವ್ಯೂಹ-ಕಮಲದ ಆಕಾರದಲ್ಲಿ ವಿಸ್ತಾರವಾಗಿ ನಿಲ್ಲಿಸಿದ ಸೇನಾ ವಿನ್ಯಾಸ, ಮೋಹಿದನು-ರಚಿಸಿದನು.

೧. ಸಂಜಯನು ಧೃತರಾಷ್ಟ್ರನಿಗೆ ಹೇಳಿದುದು. ಇತ್ತಲುಗ್ಗಡದಾನೆ ಬಿದ್ದುದು-ನಮ್ಮ ಸೈನ್ಯದಲ್ಲಿ ಪ್ರಸಿದ್ಧವಾದ ಆನೆಯೊಂದು ಬಿದ್ದಿತು (ಗಜಾರೋಹಕರಲ್ಲಿ ಪ್ರಖ್ಯಾತನಾದ ಭಗದತ್ತನು ಮಡಿದನು). ನಮ್ಮ ಕಡೆ, ಧ್ಯಾನ-ಚಿಂತೆ, ಅತ್ತಲು-ಪಾಂಡವರ ಕಡೆ, ರಾಗ-ಸಂತೋಷ, ಇಲ್ಲಿ ಮೌನ, ಅಲ್ಲಿ ರಭಸ, ಇಲ್ಲಿ ಹಾನಿ, ಅಲ್ಲಿ ವೃದ್ಧಿ, ಆಯಿತು -ಎಂದರೆ, ಕೌರವರು ಚಿಂತೆಯಲ್ಲಿದ್ದರೆಂಬ ತಾತ್ಪರ್ಯ. ಉಗ್ಗಡ-ಉತ್ಕಟ (ಸಂ.)

ಎತ್ತಲೊಲಿವುದು ಧರ್ಮಬಲ ತಾ |
ನತ್ತಲೊಲಿವುದು ದೈವ ದೈವವ |
ದೆತ್ತಲೊಲಿದಿಹುದತ್ತ ವಿಜಯ ಶ್ರೀಯ ಕುಡಿನೋಟ ||
ಹೆತ್ತ ನಿನ್ನೊಡಲಿಂಗೆ ತಂಪಿನ |
ತೆತ್ತಿಗನೊ ಮೇಣ್ಬಹಳ ತಾಪದ |
ಹತ್ತಿಗನೊ ಕುರುರಾಯನೆಲೆ ಧೃತರಾಷ್ಟ್ರ ಕೇಳೆಂದ ||೨||

ಸಾಕು ಸಂಜಯ ನುಡಿಯ ಖಡ್ಗದ |
ಲೇಕೆ ಗಂಟಲ ಕೊಯ್ವೆ ತಾನವಿ |
ವೇಕದಲುಪಾರ್ಜಿಸಿದ ದುಷ್ಕೃತವೆನಗುಪಾರ್ಜಿಸಿತು ||
ಸಾಕದಂತಿರಲಿನ್ನದೇಕೆ ವಿ |
ಶೋಕಿಸುವೆನಲ್ಲಿಂದ ಮೇಲು |
ದ್ರೇಕಿ ಕೌರವನೇನ ನೆಗಳಿದ ಹದನ ಹೇಳೆಂದ ||೩||

ಚಿತ್ತಯಿಸು ಧೃತರಾಷ್ಟ್ರ ಕೌರವ |
ನಿತ್ತನಿರುಳೋಲಗವ ಮಂಜಿನ |
ಮುತ್ತಿಗೆಯ ನಭದಂತೆ ಹೊಗೆದುದು ರಾಯನಾಸ್ಥಾನ ||
ನೆತ್ತಿಮುಸುಕಿನ ಕೈಯ ಗಲ್ಲದ |
ಕುತ್ತುದಲೆ ನಟ್ಟಾಲಿಗಳ ಚಲ |
ಚಿತ್ತದಿದ್ದುದು ಸಕಲ ನಾಯಕವಾಡಿ ದುಗುಡದಲಿ ||೪

---

೨. ಧರ್ಮಬಲ ಎತ್ತಲೊಲಿವುದು ದೈವ ತಾನು ಅತ್ತಲೊಲಿವುದು, ವಿಜಯಶ್ರೀ—ಜಯ ಲಕ್ಷ್ಮಿ, ಕುಡಿನೋಟ—ಕಟಾಕ್ಷ, ಕುರುರಾಯನು, ಹೆತ್ತ....ಹತ್ತಿಗನೊ—ಹೆತ್ತ ನಿನ್ನ ಹೊಟ ಯನ್ನು ತಣ್ಣಗೆ ಮಾಡುವವನೋ ಅಥವಾ ಸುಡುವವನೋ ? ತೆತ್ತಿಗ—ಕೊಡುವವನು.

೩. ಧೃತರಾಷ್ಟ್ರನು ಹೇಳುತ್ತಾನೆ. ನುಡಿಯ......ಕೊಯ್ವೆ—ಮಾತೆಂಬ ಕತ್ತಿಯಿಂ ನನ್ನ ಕೊರಳನ್ನೇಕೆ ಕೊಯ್ಯುವೆ ? ದುಷ್ಕೃತ—ಪಾಪ, ಉಪಾರ್ಜಿಸಿತು—ಪ್ರಾಪ್ತವಾಯಿತ ಉದ್ರೇಕಿ—ಮಿತಿಮೀರಿದ, ನೆಗಳಿದ—ಮಾಡಿದನು, ಹದನ—ರೀತಿ.

೪. ಕೌರವನು ಇರುಳೋಲಗವನ್ನು ಇತ್ತಂ. ರಾಯನ ಆಸ್ಥಾನವು ಮಂಜು ಮುಚ ಕೊಂಡ ಆಕಾಶದಂತೆ ಇದ್ದಿತು. ಹೊಗೆದುದು—ಹೊಗೆತುಂಬಿದಂತಿದ್ದಿತು. ನೆತ್ತಿಯ ಮೇ ಮುಸುಕು, ಗಲ್ಲದಮೇಲೆ ಕೈ, ಬಾಗಿದ ತಲೆ, ನಟ್ಟ ಕಣ್ಣುಗಳು, ಚಂಚಲಚಿತ್ತ —ಇವುಗಳಿಂ ಕೂಡಿದ, ನಾಯಕವಾಡಿ—ಸೇನಾನಾಯಕರ ಗುಂಪು.

ದುಗುಡವೇಕೈ ನಿಮಗೆ ಕರ್ಣಾ |
ದಿಗಳೆ ನೀವಕ್ಕಾಡಿ ಬಲು ಗಾ |
ಳಿಗದೊಳಗೆ ಕೈಮಾಡಿ ನೊಂದಿರಿ ಕೊಂದಿರರಿಭಟರ ||
ಹಗೆಯ ಕಟ್ಟಲು ಕೊಟ್ಟ ಭಾಷೆಗೆ |
ಬಿಗುಹು ಬೀತುದು ಗುರುಗಳಲಿ ನಂ |
ಬುಗೆ ನಿರರ್ಥಕವಾಯ್ತೆನುತ ಕುರುರಾಯ ಬಿಸುಸುಯ್ದ ||೫||

ದ್ರೋಣ ಮನಗೊಂಡಿರಿದೊಡಂಬುಜ |
ಪಾಣಿಯಿದಿರೇ ನಮ್ಮ ಭಾಗ್ಯದ |
ಬಾಣಸಿಗ ವಿಧಿ ವಿಷವ ಬೆರಸುವೊಡಾರು ಕಾಯ್ವವರು ||
ಹೂಣಿ ಹೊಕ್ಕನು ಹಿಡಿದು ವೈರಿ |
ಕ್ಷೋಣಿಪನ ಕಳುಹಿದನು ನಾವ |
ಕ್ಷೀಣ ದುರಿತರು ಹಲುಬಿ ಮಾಡುವುದಾವುದುಂಟೆಂದ ||೬||

ಬಲದೊಳಗೆ ಹೆಸರುಳ್ಳವರು ಮಂ |
ಮಳಿತವಾಯಿತ್ತಾನೆ ಕುದುರೆಗ |
ಳಳಿದುದಕೆ ಕಡೆಯಿಲ್ಲ ಪವನಜ ಪಾರ್ಥರುಬ್ಬಟೆಯ ||
ನಿಲಿಸುವಾಪತ್ತಿಗರು ನಮಗಿ |
ಲ್ಲಳಲಿ ಮಾಡುವುದೇನೆನುತ ನೃಪ |
ತಿಲಕ ಬೇಸರ ನುಡಿಯೆ ಬಳಿಕಿಂತೆಂದನಾ ದ್ರೋಣ ||೭||

---

೫. ಕರ್ಣಾದಿ ವೀರರಿರಾ ! ಅಕ್ಕಾಡಿ-ಸಂಭ್ರಮದಿಂದ ನುಗ್ಗಿ, ಕಾದಿ ನೊಂದಿರಿ, ದ್ರೋಣಾಚಾರ್ಯರು ಶತ್ರುವನ್ನು ಹಿಡಿಯುವೆನೆಂದು ಕೊಟ್ಟ ಭಾಷೆ ವ್ಯರ್ಥವಾಯಿತು. ಬಿಗುಹು-ಪೃಥಕ್ತ್ವ, ಬೀತುದು-ಕೊನೆಗಂಡಿತು-ಮುಗಿಯಿತು. ಬಿಗುಹು, ನಂಬುಗೆ (ಕೃದಂತ).

೬. ಅಂಬುಜ ಪಾಣಿ-ಕಮಲವನ್ನು ಹಿಡಿದಿರುವವನು-ವಿಷ್ಣು, ಭಾಗ್ಯದ ಬಾಣಸಿಗ-ಭಾಗ್ಯವನ್ನು ಅಡಿಗೆ ಮಾಡುವವ, ವಿಧಿಯೇ ವಿಷ ಹಾಕಿದರೆ ಯಾರು ರಕ್ಷಿಸುವರು ? ಹೂಣಿ-ಪ್ರತಿಜ್ಞೆಮಾಡಿ, ದ್ರೋಣನು ಯುದ್ಧದಲ್ಲಿ ಕೈಗೆ ಸಿಕ್ಕಿದ್ದ ಧರ್ಮರಾಯನನ್ನು ಬಿಟ್ಟುಬಿಟ್ಟನು; ಹಲುಬಿ-ಚಿಂತಿಸಿ.

೭. ಮಂಮಳಿತವಾಯಿತ್ತು-ರೂಪಳಿದ ಸಾವನ್ನು ಹೊಂದಿತು, ಉಬ್ಬಟೆ-ಪರಾಕ್ರಮ, ಅಕ್ಷೀಣ-ನಾಶವಾಗದ, ಆಪತ್ತಿಗರು-ಹೊಂದಿಕೊಂಡಿರುವವರು. ಅಳಲಿ-ದುಃಖಪಟ್ಟು.

ಪರಮ ಗರುಡೋದ್ಗಾರ ಮಣಿಯನು ।
ಗರಳ ಸುಡುವುದೆ ಕೃಷ್ಣರಾಯನ ।
ಕರುಣ ಕವಚವನೊಡೆಯಲಾಪವೆ ನಮ್ಮ ಕೈದುಗಳು ॥
ಅರಸ ಮರುಳೇ ಧರ್ಮಪುತ್ರನ ।
ಬೆರಸಿ ತುಡುಕಲು ತಡೆದನರಿಯಾ ।
ಮುರಹರನ ಮೈದುನನು ಬಳಿಕೆಮ್ಮಳವೆ ಹೇಳೆಂದ ||

ನಾಳೆ ಫಲುಗುಣ ತಪ್ಪಿದೊಡೆ ಭೂ ।
ಪಾಲಕನ ಕಟ್ಟುವೆನು ರಣದಲಿ ।
ಶೂಲಿಯಡ್ಡೈಸಿದೊಡೆ ಹಿಡಿವೆನು ಚಿಂತೆ ಬೇಡಿದಕೆ ॥
ಕೇಳು ಪದ್ಮವ್ಯೂಹದಲಿ ಹೊ ।
ಕ್ಕಾಳು ಮರಳಿದೊಡಸ್ತ್ರವಿದ್ಯಾ ।
ಭಾಳಲೋಚನನೆಂಬ ಬಿರುದನು ಬಿಟ್ಟೆ ನಾನೆಂದ ||

ಒಳ್ಳಿತಿದು ಕಡುಭಾಷೆ ನಾಳಿನ ।
ಗೆಲ್ಲವೇ ಗೆಲವರ್ಜುನನು ಹೊ ।
ಕ್ಕಲ್ಲಿ ಹೊಗುವೆವು ತರುಬಿ ಕಾದುವೆವೆಮ್ಮ ಕಳನೊಳಗೆ ॥
ಅಲ್ಲಿ ನೀನೊಲಿದಂತೆ ಮಾಡಿ ।
ನ್ನೆಲ್ಲವೇತಕ್ಕೆನುತ ಸಾಹಸ ।
ಮಲ್ಲರಿರ್ದರು ವೀರ ಸಂಶಪ್ತಕರು ಗರ್ಜಿಸುತ ||೧

ಪೂತು ಪಾಯಕು ತತ್ತಹೊತ್ತಿನೊ ।
ಳಾತುಕೊಂಬುವರಾರು ಪಾರ್ಥಿವ ।
ಜಾತಿಯಲಿ ರಣಧಿಟ್ಟರುಂಟೇ ನಿಮ್ಮ ಹೋಲಿಸಲು ॥

---

೮. ಗರುಡೋದ್ಗಾರಮಣಿ—ಗಾರುಡವೆಂಬ ರತ್ನ, ಗರಳ—ವಿಷ, ಕೈದು—ಆಯು
ಅರಸ! ಮರುಳೇ! ಬೆರಸಿ ತುಡುಕಲು—ನುಗ್ಗಿ ಹಿಡಿಯಲು, ಎಮ್ಮಳವೆ—ನಮಗೆ ಸಾಧ್ಯವೇ?

೯. ಫಲುಗುಣ—ಅರ್ಜುನನು, ತಪ್ಪಿದೊಡೆ—ಯುದ್ಧಭೂಮಿಗೆ ಬಾರದಿದ್ದರೆ, ಶೂ
ಶಿವನು, ಭಾಳಲೋಚನ—ಹಣೆಯಲ್ಲಿ ಕಣ್ಣುಳ್ಳವನು—ಶಿವ.

೧೦. ಕಡು ಭಾಷೆ—ಕಠಿನ ಪ್ರತಿಜ್ಞೆ, ಕಳ—ಯುದ್ಧಭೂಮಿ, ಒಲಿದಂತೆ—ಇಷ್ಟಪಡ್ದಂ
ಸಂಶಪ್ತಕರು—ಪ್ರತಿಜ್ಞೆಮಾಡಿರುವ ಯೋಧರು.

೧೧. ಪೂತು, ಪಾಯಕು—ಇವು ಮೆಚ್ಚಿಗೆಯ ಶಬ್ದಗಳು, ತತ್ತಹೊತ್ತು—ಭಯಗೊ

ಸೋತುದರಿಬಲ ಹೋಗೆನಲು ಮು ।
ಯ್ಯಾಂತು ಮನ್ನಿಸಿ ಹೊನ್ನ ಬಟ್ಟಲೊ ।
ಳಾತಗಳಿಗೊಲಿದಿತ್ತನೈ ಕರ್ಪುರದ ವೀಳೆಯವ ॥೧೧॥

ಹರಿದುದೋಲಗವಿತ್ತ ಭುವನದೊ ।
ಳಿರುಳಡವಿಗಡಿತಕ್ಕೆ ಹರಿದುವು ।
ಕಿರಣ ತೆತ್ತಿದುವಭ್ರದಲಿ ತಾರಕಿಯ ತೇರುಗಳ ॥
ಹರಿವ ಮಂಜಿನ ನದಿಯ ಹೂಳ್ದುವು ।
ಸರಸವಾಯಿತು ಗಗನ ತಳ ತಾ ।
ವರೆಯ ಸಖ ನಿಜ ರಥವ ನೂಕಿದನುದಯ ಪರ್ವತಕೆ ॥೧೨॥

ಕೆದರಿದುವು ನಿಸ್ಸಾಳ ಬರಸಿಡಿ ।
ಲದುಭುತ ಧ್ವನಿಯಲಿ ನಿರಂತರ ।
ವೊದರಿ ಬಯ್ದುವು ಕಹಳೆ ಬಿರುದಾವಳಿಯಲತಿರಥರ ॥
ಕದುಬಿದುವು ತಮ್ಮಟದ ದನಿ ದಿಗು ।
ವದನವನು ಬಲು ಬೊಬ್ಬೆಯಲಿ ನೆಲ ।
ನದುರೆ ನಡೆದುದು ಸೇನೆ ಕಲಶೋದ್ಭವನ ಸನ್ನೆಯಲಿ ॥೧೩॥

ಉಲಿದು ಸಂಶಪ್ತಕರು ತಮ್ಮಯ ।
ಕಳನ ಬಲಿದರು ಚಾತುರಂಗದ ।
ದಳದ ತೆರಳಿಕೆ ತೆಕ್ಕೆ ಮಿಗೆ ಕುರುಭೂಮಿಗೈತಂದು ॥

ೞೆಳೆ, ಅತುಕೊಂಬುವರಾರು—(ನಿಮ್ಮಂತೆ) ಕೈಹಿಡಿಯುವರಾರು ? ಧಿಟ್ಟ—ಧೃಷ್ಟ (ಸಂ.), ಮುಯ್ಯಾಂತು—ಬಹುಮಾನವನ್ನು ತರಿಸಿ, ಆತಗಳಿಗೆ—ಅವರಿಗೆ, ಚಿನ್ನದ ತಟ್ಟೆಯಲ್ಲಿ ತಾಂಬೂಲವನ್ನು (ಕುರುಪತಿ) ಕೊಟ್ಟನು. ವೀಳೆಯ—ವೀಟಿಕಾ (ಸಂ.)

೧೨. ಹರಿದುದು—ಮುಗಿಯಿತು, (ಸೂರ್ಯನ) ಕಿರಣಗಳು ಇರುಳೆಂಬ ಅಡವಿಯ ಕಡಿತಕ್ಕೆ ಹೋದುವು, ತೆತ್ತಿದುವು—ಮಧ್ಯದಲ್ಲಿ ಹೊಕ್ಕುವು, ತೇರು—ಗುಂಪು.

೧೩. ನಿಸ್ಸಾಳ—ಕನಕ ತಬಟೆ(ಧ್ವನಿ), ಕೆದರಿದುವು—ಹರಡಿಕೊಂಡುವು. ನಿರಂತರ.... ಅತಿರಥರ—ಶೂರರ ಬಿರುದಾವಳಿಗಳನ್ನು ಕಹಳೆಗಳು ಆರ್ಭಟಿಸಿ ನಿಂದಿಸಿದುವು, ಕಹಳೆ—ತುತೂರಿ, ದಿಗುವದನ—ದಿಗ್ವದನ (ಸಂ.) — ದಿಙ್ಮುಖ, ಕದುಬಿದುವು — ಮುತ್ತಿದುವು, ಕಲಶೋದ್ಭವ—ದ್ರೋಣ, ಸನ್ನೆ—ಸಂಜ್ಞಾ (ಸಂ.).

೧೪. ಕಳನ ಬಲಿದರು—ಯುದ್ಧಭೂಮಿಯನ್ನು ಸೇರಿದರು, ತೆರಳಿಕೆ—ಸಮೂಹ, ತೆಕ್ಕೆ ಮಿಗೆ—ಗುಂಪುಗುಂಪಾಗಿ, ರಾಯನ—ದುರ್ಯೋಧನನ, ಕೆಲ ಬಲದ— ಉಭಯ ಪಾರ್ಶ್ವದ,

ಕಳನ ವೆಂಠಣಿಸಿದುವು ರಾಯನ |
ಕೆಲಬಲದ ಸುಯಿಧಾನದಲಿ ರಿಪು |
ವಲಯ ಧೂಳೀಪಟಲ ಹೊಕ್ಕನು ರಣವನಾ ದ್ರೋಣ ||೧

ಸೆರೆದ ನಿಜ ಸೇನಾಧಿಪರ ಸಂ |
ವರಣೆಗಳ ನೋಡಿದನು ನೀಡಿದ |
ನುರು ಬಿರುದ ಮಂಡಲಿಕರಿಗೆ ಕಾಳೆಗದ ವೀಳೆಯವ ||
ಹರಿಗೆ ಹಲಗೆ ಕೃಪಾಣ ತೋಮರ |
ಪರಶು ಕಕ್ಕಡೆ ಕುಂತ ಮುದ್ಗರ |
ಸುರಗಿಯುತಿಬಲ ನಾಯಕರ ನಿಲಿಸಿದನು ವಳಯದಲಿ ||೧

ಎಸಳೆಸಳು ಮಿಗೆ ಸರಿಸದಲಿ ಜೋ |
ಡಿಸಿದನವನೀಪಾಲರನು ತ |
ದ್ಬಿಸಜ ಕರ್ಣಿಕೆಯೊಡ್ಡಿನಲಿ ಬಲಿದನು ಸುಯೋಧನನ ||
ಪಸರಿಸಿತು ಕೌರವ ಕುಮಾರ |
ಪ್ರಸರ ಕೇಸರವಾಗಿ ವ್ಯತ್ಯಾವಿ |
ನೊಸಗೆಗೆತ್ತಿದ ಗುಡಿಯೆಸಲು ತಳಿತುವು ಪತಾಕೆಗಳು ||೧

ನಿಲಿಸಿದನು ರಾವುತರನಾ ಹೊರ |
ವಳಯದಲಿ ರಾವುತರು ಮುರಿದೊಡೆ |
ನಿಲುವುದೊಗ್ಗಿನ ದಂತಿಘಟೆ ನಿಜಸೇನೆಗಡಹಾಗಿ ||

---

ಸುಯಿಧಾನದಲಿ—ಏರ್ಪಾಡಿನಲ್ಲಿ, ವೆಂಠಣಿಸಿದುವು—ಸೇರಿದುವು, ರಿಪುವಲಯ ಧೂಳೀಪಟ
ಶತ್ರು ಸಮೂಹವನ್ನು ಪುಡಿಪುಡಿಯಾಗಿ ಮಾಡುವ, ದ್ರೋಣನು.

೧೫. ಸಂವರಣೆ—ಸನ್ನಾಹ, ಉರು ಬಿರುದ—ದೊಡ್ಡ ಬಿರುದುಗಳುಳ್ಳ, ಮಂಡಲಿಕ
ಸೇನಾಪತಿಗಳು, ಹರಿಗೆ—ಗುರಾಣಿ, ಹಲಗೆ—ಫಲಕ (ಸಂ.), ಕೃಪಾಣ—ಕತ್ತಿ, ತೋಮ
ಕಬ್ಬಿಣದ ಹಾರೆ, ಪರಶು—ಕೊಡಲಿ, ಕಕ್ಕಡೆ—ಕಠಾರಿ, ಕುಂತ—ಭಾಲೆ, ಮುದ್ಗರ—
ಸುರಗಿ—ಕತ್ತಿ—ಛುರಿಕಾ (ಸಂ.).

೧೬. ಸರಿಸದಲಿ—ಎದುರು ಬದುರಾಗಿ, ಬಿಸಜ ಕರ್ಣಿಕೆ—ಕಮಲದ ಮಧ್ಯದ ಗುಬು
ಒಡ್ಡು—ಗುಂಪು, ಬಲಿದನು—ನಿಲ್ಲಿಸಿದನು, ಕೌರವ ಕುಮಾರ ಪ್ರಸರವು ಕೇಸರವಾಗಿ ಪಸರಿ
ಒಸಗೆಗೆ—ಶುಭಕ್ಕೆ, ಗುಡಿ—ಧ್ವಜ, ತಳಿತುವು—ಕಟ್ಟಲ್ಪಟ್ಟುವು.

೧೭. ರಾವುತರು—ಕುದುರೆಯ ಸವಾರರು, ಮುರಿದೊಡೆ—ಸೋತರೆ, ಒಗ್ಗಿನ—ಗುಂಪ

ತೊಲಗಿದೊಡೆ ತೇರುಗಳು ತೇರಿನ |
ದಳಕೆ ತಾನೊತ್ತಾಗಿ ರಣದ |
ಗ್ಗಳೆಯರರ್ದರು ರಾಯರೊಡಹುಟ್ಟಿದರು ಸಂದಣಿಸಿ ||೧೭||
ಅರೆ ನೆಲೆಯ ಸುಯಿಧಾನ ಬಾಹ್ಲಿಕ |
ತರಣಿಸುತ ಗುರುಸೂನು ಕೃತವ |
ರ್ಮರಿಗೆ ಕೃಪ ದುಶ್ಶಾಸನಾದ್ಯರಿಗಿದಿರಿನಾರಯ್ಕೆ ||
ಎರಡು ಕೆಲದಲಿ ಶಲ್ಯ ಶಕುನಿಗ |
ಳಿರಲು ಸೇನೆಯ ಸುತ್ತು ವಳಯದ |
ಭರವ ಕೈಕೊಂಡೊಡ್ಡ ಮೆರೆದಸು ಗರುಡಿಯಾಚಾರ್ಯ ||೧೮||
ಹಿಳುಕ ತಿರುಹುತ ಸಂಮುಖದ ಬಲ |
ದಳವಿಯಲಿ ಗಿರಿಯಂತೆ ಸೈಂಧವ |
ಬಿಲುದುಡುಕೆ ಮೋಹರಿಸಿದರು ಭೂರಿಶ್ರವಾದಿಗಳು ||
ದಳದ ಕೆಲಬಲದೊಳಗೆ ನೃಪ ಸಂ |
ಕುಲವ ನಿಲಿಸಿದನಮಮ ಕಾಲನ |
ಬಳಗಕೌತಣವಾಯ್ತು ಚಕ್ರವ್ಯೂಹ ರಚನೆಯಲಿ ||೧೯||
ಏನ ಹೇಳುವೆನಂಥ ನೃಪತಿಯ |
ಸೂನುವಿನ ಮೋಹರವನಳ್ಳಿರಿ |
ವಾನೆಗಳನವ್ವಳಿಸಿ ಗಗನಕೆ ನೆಗೆವ ಕುದುರೆಗಳ ||
ಆ ನೃಪರ ರಥ ವಾಜಿಗಳ ಗಿರಿ |
ಸಾನು ಸಡಿಲಲು ಜಡಿವ ಭೇರೀ |
ಧ್ವಾನವನು ಪಾಯ್ದಳದ ಸುಭಟರ ಸಿಂಹಗರ್ಜನೆಯ ||೨೦||

---

ಂತಿಘಟೆ—ಆನೆಯ ಸಮೂಹ, ಅಡಹಾಗಿ—ಆಶ್ರಯವಾಗಿ, ತೊಲಗಿದೊಡೆ—ಹೋದರೆ.

೧೮. ಅರೆನೆಲೆ—ಹಿಂಗಾವಲು, ಸುಯಿಧಾನ—ಏರ್ಪಾಡು, ತರಣಿಸುತ—ಕರ್ಣ, ಗುರು
ೂನು—ಅಶ್ವತ್ಥಾಮ, ಆರಯ್ಕೆ—ಕಾವಲು, ಭರ—ರಕ್ಷಣೆ, ಕೈಕೊಂಡ, ಒಡ್ಡ—ಸೈನ್ಯವನ್ನು,
ರುಡಿಯಾಚಾರ್ಯ—ದ್ರೋಣ, ಗರುಡಿ—ಖುರಳಿ (ಸಂ.).

೧೯. ಹಿಳುಕ—ಬಾಣದ ಗರಿಯನ್ನು, ಅಳವಿ—ಸಮೀಪ, ಬಿಲುದುಡುಕೆ—ಬಿಲ್ಲನ್ನು
ಿಡಿದುಕೊಂಡಿರಲು

೨೦. ಮೋಹರ—ಸೈನ್ಯ, ಅಳ್ಳಿರಿವ—(ರೋಷದಿಂದ) ನಡುಗುತ್ತಿರುವ, ಅವ್ವಳಿಸಿ—
ಾರಿ, ಗಿರಿಸಾನು—ಬೆಟ್ಟದ ಸಮಭೂಮಿ, ಸಡಿಲಲು—ಸಡಿಲುವಂತೆ, ಜಡಿವ — ಹೊಡೆವ,
ಾಯ್ದಳ—ಕಾಲಾಳು.

ಜವನಣಲು ಮೃತ್ಯುವಿನ ತಾಳಿಗೆ ।
ಬವರ ಭೈರವನುದರ ಕಂಠೀ ।
ರವನ ದಾಡೆಗಳಿರುಬು ಭುಜಗನ ನಾಲಗೆಯ ಬಿರುಬು ॥
ಹವಣ ಹೊಗಳುವೊಡರಿದು ಬರಸಿಡಿ ।
ಲವನಿಗಿಳಿದುದೊ ಬಡಬ ವಹ್ನಿಯ ।
ಜವಳಿಕೆಯೊ ಪೊಸತೆನಲು ಚಕ್ರವ್ಯೂಹ ರಂಜಿಸಿತು ||…

ಭಟರ ಬಿಲು ಝೇಂಕಾರ ಹೊಯ್ಲಿನ ।
ಪಟಹದಬ್ಬರ ಲಗ್ಗೆಸೂಳಿನ ।
ಚಟುಳತರ ನಿಸ್ಸಾಳ ರವ ತಂಬಟದ ಕಡು ದನಿಯ ॥
ಪಟು ಭಟರ ಬೊಬ್ಬೆಗಳ ವುಬ್ಬರ ।
ಕಟಕದಬ್ಬರ ತಡೆಯಲಾಗದು ।
ನಿಟಿಲನಯನನ ದಿನದಲೊದಗುವ ಕಡಲ ನಡುಗಿಸಿತು ||…

ಕಾಲರುದ್ರನ ಕೈಯ ಶೂಲವೊ ।
ಕಾಲಭೈರವ ಹಿಡಿವ ಬಲುಕರ ।
ವಾಳವೋ ಪ್ರಳಯಾಂತ ಕೋಣನ ಕೋಡ ಹೊಯ್ಲುಗಳೋ…
ಏಳಿಸುವೊಡಿದು ಮೃತ್ಯುವಿನ ಗೋ ।
ನಾಳಿ ಹೊಗುವೊಡೆ ಕಡಲ ನಡುಸುಳಿ ।
ಕಾಲ ಮೇಘದವೊತ್ತವೆನಲಂಜಿಸಿತು ಬಿರುದರನು ||…

---

೨೧. ಜವ–ಯಮ (ಸಂ.) ಅಣಲು–ಅಂಗಳು, ತಾಳಿಗೆ–ಗಂಟಲು, ಬವರ ಭೈ… ಯುದ್ಧಭೈರವ, ಕಂಠೀರವ–ಸಿಂಹ, ದಾಡೆ–ದಂಷ್ಟ್ರ (ಸಂ.)–ಕೋರೆಹಲ್ಲು, ಇರು… ಇರಿತ–ಚುಚ್ಚುವಿಕೆ, ಬಿರುಬು–ಕಾಠಿನ್ಯ, ಹವಣು–ಪ್ರಮಾಣ (ಸಂ.), ಅರಿದು–ಅಸಾ… ಜವಳಿಕೆ–ಜತೆ–ಸಮಾನ, ಜವಳ–ಯಮಳ (ಸಂ.).

೨೨. ಹೊಯ್ಲಿನ ಪಟಹ – ಹುಯ್ಲುದಮಟೆ, ಚಟುಳತರ – ಹೆಚ್ಚಾಗಿ ನಡು… ಲಗ್ಗೆಸೂಳಿನ – ಮುತ್ತಿಗೆ ಹಾಕುವಾಗಳಿನ, ನಿಸ್ಸಾಳ – ಭೇರಿ, ನಿಟಿಲ ನಯನ – ಹಣೆಗಣ್… ಶಿವ, ನಿಟಿಲ ನಯನನ ದಿನ–ಪ್ರಳಯ ಕಾಲ.

೨೩. ಕರವಾಳ–ಕತ್ತಿ, ಪ್ರಳಯಾಂತ ಕೋಣ–ಪ್ರಳಯಕಾಲದ ಯಮನ ಕೊ… ಏಳಿಸುವೊಡೆ – (ಈ ಚಕ್ರವ್ಯೂಹವನ್ನು) ತಿರಸ್ಕರಿಸೋಣವೆಂದರೆ, ಗೋನಾಳಿ – ಕೊ… ಬಿರುದರು–ಬಿರುದುಳ್ಳ ಶೂರರು.

ಮೊಳಗಿದುವು ನಿಸ್ಸಾಳ ಕಡಲ |
ವ್ವಳಿಸಿದಂತಿರೆ ಸಿಡಿಲ ಹೊಯ್ಲಿನ |
ಬಳಗದಂತಿರೆ ಕೂಡೆ ಬಿರುದಿನ ಭಟರು ಬೊಬ್ಬಿಡಲು ||
ಉಲಿವ ತೇಜಿಯ ಝುಂಕೆಗಳ ಗೊಂ |
ದಳದ ಕರಿಘಟೆ ಗಜರುಗಳ ವೆ |
ಗ್ಗಳದ ರವದದ್ಭುತವು ಕೌರವ ಸೈನ್ಯ ಶರಧಿಯಲಿ ||೨೪||

ಮೇಳವದೊಳೆನ್ನಾನೆಗಳ ಬರ |
ಹೇಳು ಸುಭಟರೊಳಗ್ಗಳರ ಬರ |
ಹೇಳು ಬಿಂಕಕೆ ಬೆರೆವ ಭೀಮಾರ್ಜುನರ ಬರಹೇಳು ||
ಲೋಲುಪತಿಯವನಿಯಲಿ ಹರಿ ಬರ |
ಹೇಳು ಯಮನಂದನನನಿಂದಿನ |
ಕಾಳೆಗಕ್ಕೆಂದಿತ್ತ ಭಟ್ಟರಸಟ್ಟಿದನು ದ್ರೋಣ ||೨೫||

ತುರಗ ಹಲ್ಲಣಿಸಿದುವು ಸದಮುಲ |
ಧುರದ ಸೌರಂಭದಲಿ ಮುಸುಕಿದ |
ತುರಗದಲಿ ಹೂಡಿದುವು ರಥ ಕಾಲಾಳ ಮುಂಕೊಂಡು ||
ಅರಸನನುಜರು ಸಹಿತ ಕೃಷ್ಣನ |
ಬೆರಳ ಸನ್ನೆಗೆ ತೀವಿ ಬಿಡೆ ಮೋ |
ಹರಿಸಿ ನಿಂದರು ಮುರಿದ ಮಕರವ್ಯೂಹ ರಚನೆಯಲಿ ||೨೬||

---

೨೪. ಅವ್ವಳಿಸು—(ನೆಗೆ)—ಉಕ್ಕು, ತೇಜಿ—ಕುದುರೆ, ಝುಂಕೆ—ಕಿರುಚುವಿಕೆ, ಗೊಂದಳ—ಗಲಿಬಿಲಿ, ಘಟೆ—ಗುಂಪು.

೨೫. ಮೇಳವದೊಳು—ಉತ್ಸವದಿಂದ, ಎನ್ನಾನೆಗಳು – ನಮ್ಮ ಕಡೆಯ ಶೂರರು (ಪ್ರೇಮದ ನುಡಿ), ಅಗ್ಗಳರ—ಸಮರ್ಥರನ್ನು, ಬಿಂಕಕೆ ಬೆರೆವ—ಅಹಂಕಾರದಿಂದ ಮೆರೆವ, ಅವನಿಯಲ್ಲಿ ಲೋಲುಪನಾದ ಹರಿಯುನ್ನು ಬರಹೇಳು, ಯಮನಂದನ—ಧರ್ಮರಾಯ.

೨೬. ಹಲ್ಲಣಿಸಿದುವು—ಜೀನುಹಾಕಿ ಸಿದ್ಧವಾದುವು, ಹಲ್ಲಣ—ಪಲ್ಯಯನ (ಸಂ), ಧುರ—ಯುದ್ಧ, ಸೌರಂಭ—ಸಡಗರ, ಸದಮುಲ....ರಥ—ಯುದ್ಧದ ಸಡಗರದಿಂದ ಕೂಡಿದ ಕುದುರೆಗಳಿಂದ ರಥಗಳು ಹೂಡಲ್ಪಟ್ಟುವು, ಅರಸನು—ಧರ್ಮರಾಯನು, ತೀವಿ ಬಿಡೆ—ಗುಂಪಾಗಿ, ಮೋಹರಿಸಿ—ಸೈನ್ಯದಿಂದ ಕೂಡಿ, ಮುರಿದ—ತಿದ್ದಿದ, ಮಕರವ್ಯೂಹ ರಚನೆಯಲ್ಲಿ—ಮೊಸಳೆಯಾಕಾರದ ರೀತಿಯಲ್ಲಿ.

ನಡೆದು ಸಂಶಪ್ತಕರು ಬವರದ |
ಬೆಡಗಿನಲಿ ಮೋಹರದ ಮುರಿವನು |
ಗಡಣಿಸಿದರರ್ಜುನನ ಬರಲಟ್ಟಿದರು ಭಟ್ಟರನು ||
ಸಿಡಿಲ ತಾಳಿಗೆಯೆನಲು ದೂತರು |
ಗಡಬಡಿಸಿ ಪಾರ್ಥನನು ಕಾಳಗ |
ದೆಡೆಗೆ ಕರೆಯಲು ವಹಿಲ ಮಿಗಲೈತಂದರಾ ಕ್ಷಣದೆ ||೨

ಬಂದು ಸಂಶಪ್ತಕರ ದೂತರು |
ನಿಂದರರ್ಜುನನಿದಿರಿನಲಿ ನೀಂ |
ನಂದಗೋಪನ ಮಗನ ಬಿಡು ನೆರವಿಂಗೆ ಕರೆ ಹರನ ||
ಇಂದು ರಣದಲಿ ಬದುಕಿದಡೆ ನೀ |
ನೆಂದಿಗೆಯು ಬದುಕಿದವ ನಿಂದಿರು |
ನಿಂದಿರೆಂದವಗಡಿಸಿ ಹಿಡಿದರು ಫಲುಗುಣನ ಸೆರಗ ||೨

ಖರೆಯರಹಿರುಂಟುಂಟು ನೆರವನು |
ಶರಿಸಿಕೊಡಿ ಬಹೆನೆನುತಲರಿಗಳ |
ಚರರ ಕಳುಹಲು ದ್ರೋಣನಟ್ಟಿದ ಭಟ್ಟರೈತಂದು ||
ಕರೆದರರ್ಜುನನನು ವೃಕೋದರ |
ಧರಣಿಪತಿ ಮಾದ್ರೇಯ ಹೈಡಿಂ |
ಬರಿಗೆ ನೂಕದು ಪಾರ್ಥ ಪದ್ಮವ್ಯೂಹವಿಂದಿನಲಿ ||೨

ಶಿವನ ಬೇಡಿದ ಶರವ ತೆಗೆ ಗಾಂ|
ಡಿವವ ಬಿಗಿ ನಿನ್ನಿಷ್ಟದೈವವ |
ತವಕದಲಿ ನೀಂ ಬೇಡಿಕೊಂಬುದು ಪರಮ ಸದ್ಗತಿಯ ||

---

೨೭. ಬವರ—ಯುದ್ಧ, ಬೆಡಗು—ಸೊಗಸು, ಮೋಹರದ ಮುರಿವನು ಗಡಣಿಸಿದರ
ವ್ಯೂಹವನ್ನು ಗುಂಪುಸೇರಿಸಿದರು.

೨೮. ನಂದಗೋಪನ ಮಗ—ಕೃಷ್ಣ, ಅವಗಡಿಸಿ—ನಿಂದಿಸಿ.

೨೯. ಖರೆಯರು—ಸತ್ಯವಾದಿಗಳು, ಅಹಿರಿ—ಆಗಿರುವಿರಿ, ಅರಿಗಳ ಚರರ—ಸಂಶಪ್ತ
ದೂತರನ್ನು, (ಅರ್ಜುನನು) ಕಳುಹಲು. ವೃಕೋದರ—ಭೀಮ (ತೋಳದಂತೆ ಹೊಟ್ಟೆಯು
ವನು ಅಥವಾ ಹೊಟ್ಟೆಯಲ್ಲಿ ವೃಕವೆಂಬ ಅಗ್ನಿಯುಳ್ಳವನು.), ಧರಣಿಪತಿ—ಧರ್ಮರಾ
ಮಾದ್ರೇಯ—ನಕುಲ ಸಹದೇವರು (ಮಾದ್ರೀದೇವಿಯ ಮಕ್ಕಳು), ಹೈಡಿಂಬ—ಘಟೋತ್ಕ
(ಹಿಡಿಂಬಿಯ ಮಗ), ಪಾರ್ಥ—ಪಾರ್ಥನೇ ! ನೂಕದು—ತಳ್ಳಲಾಗದು.

೩೦. ಶಿವನ ಬೇಡಿದ ಶರ—ಪಾಶುಪತಾಸ್ತ್ರ, ಗಾಂಡಿವ—ಅರ್ಜುನನ ಧನುಸ್ಸು, ಅವ

ಅವರಿವರ ಹವಣಲ್ಲ ಗುರು ಮುನಿ |
ದವಗಡಿಸಿದಡೆ ನಿಲುವನಾವನು |
ಬವರಕೇಳೇಳೆಂದು ಜರೆದರು ದೂತರರ್ಜುನನ ||೩೦||
ಚರರ ಕಳುಹಿದನಸುರರಿಪುವಿಗೆ |
ಕರವ ಮುಗಿದನು ಪಾರ್ಥನೀ ಸಂ |
ಗರದೊಳಗೆ ನಿಮ್ಮಡಿಯ ಚಿತ್ತದೊಳಾವ ಥಟ್ಟಿನಲಿ ||
ಬೆರಸುವೆವು ನಾವಿಂದಿನೀ ಮೋ |
ಹರದ ಮುರಿವಸದಳ ನಿಧಾನಿಸ |
ಲರಿದೆನಲು ಮನದೊಳಗೆ ನಿಶ್ಚಯಿಸಿದನು ಮುರವೈರಿ ||೩೧||
ಅಳಿಯನೀ ಮೋಹರದೊಳಲ್ಲದೆ |
ಫಲುಗುಣನ ಮಗನಿವನು ಬಲುಗೈ |
ಯುಳುಹಬಾರದು ಕಾಯ್ದೊಡೀ ಕಲಿಯುಗಕೆ ಗತಿಯಿಲ್ಲ ||
ಫಲುಗುಣನ ನಾವಿತ್ತಲೊಯ್ದರೆ |
ಬಳಿಕ ನಿರ್ಣಯವೆಂದು ಮನದಲಿ |
ತಿಳಿದು ಪಾರ್ಥಂಗೆಂದನಸುರಾರಾತಿ ನಸು ನಗುತ ||೩೨||
ಗುಣಕೆ ಹುರುಡೇ ನಿನ್ನ ಮಗನೀ |
ರಣಕೆ ಬಗೆವನೆ ಸೂರ್ಯನಾರೋ |
ಗಣೆಗೆ ಸೊಡರೇ ಸಾಕದೇತಕೆ ಬಯಲ ಭಂಡತನ ||
ಕೆಣಕು ನಡೆ ಸಂಶಪ್ತಕರನೀ |
ಬಣಗುಗಳ ಕೊಂಬನೆ ಕುಮಾರಕ |
ನಣಕವಲ್ಲೆಂದಸುರರಿಪು ತಿರುಹಿದನು ನಿಜರಥವ ||೩೩||

---

ಹವಣಲ್ಲ—ಸಾಮಾನ್ಯರಿಗೆ ಸಾಧ್ಯವಲ್ಲ, ಅವಗಡಿಸಿದಡೆ—ಎದುರುಬಿದ್ದರೆ.

೩೧. ನಿಮ್ಮಡಿಯ—ನಿಮ್ಮ, ಥಟ್ಟು—ಸೈನ್ಯ, ನಿಮ್ಮಡಿಯ....ಬೆರಸುವೆವು ನಾವು—ನಾವು ಯಾವ ಸೈನ್ಯದ ಮೇಲೆ (ಸಂಶಪ್ತಕರ ಮೇಲೆಯೋ ಅಥವಾ ಪದ್ಮವ್ಯೂಹದ ಮೇಲೆಯೋ) ಯುದ್ಧಕ್ಕೆ ಹೋಗಬೇಕೆಂದು ತಮ್ಮ ಇಚ್ಛೆ? ನಿಧಾನಿಸಲರಿದು—ಸಾವಕಾಶ ಮಾಡುವುದು ಸರಿಯಲ್ಲ.

೩೨. ಈ ಮೋಹರದೊಳಲ್ಲದೆ—ಈ ಪದ್ಮವ್ಯೂಹದಲ್ಲಲ್ಲದೆ, ಫಲುಗುಣನ ಮಗನಿವನು—ಈ ಅಭಿಮನ್ಯುವು, ಅಳಿಯನು—ಸಾಯನು, ಬಲುಗೈ—ಬಲಶಾಲಿ.

೩೩. ಬಗೆವನೆ—ಲಕ್ಷ್ಯಮಾಡುವನೆ? ಸೂರ್ಯ........ಸೊಡರೇ—ಸೂರ್ಯನ ಊಟಕ್ಕೆ ಬೆಳಕೇಕೆ? ಎಂದರೆ, ಅಸಹಾಯ ಶೂರನಾದ ಅಭಿಮನ್ಯುವಿಗೆ ಸಹಾಯವಾವಶ್ಯಕವಿಲ್ಲವೆಂದರ್ಥ; ಬಣಗುಗಳ—ಅಲ್ಪರನ್ನು, ಅಣಕ—ವಿನೋದ.

ಹರಿ ಸಹಿತ ಕಲಿಪಾರ್ಥನತ್ತಲು ।
ತಿರುಗಿದನು ಬಳಿಕಿತ್ತಲೀ ಮೋ ।
ಹರ ಮಹಾಂಭೋನಿಧಿಗೆ ಮೊಗಸಿತು ಪರ್ವತೋಪಮರು ॥
ಮೊರೆವ ಪಟಹ ಮೃದಂಗ ಘನಜ ।
ರ್ಝುರಿತವೆನೆ ನಿಸ್ಸಾಳ ರವದ ।
ಬ್ಬರಣೆ ಗಬ್ಬರಿಸಿದುದು ಕಮಲಭವಾಂಡ ಖರ್ಪರವ ॥೩

ಅರರೆ ಗಜರುವ ಕಹಳೆಗಳ ಬೊ ।
ಬ್ಬಿರಿವ ನಿಸಾ್ಸಳದಲಿ ಗರುಡಿಯು ।
ಗುರುವಿನೊಡ್ಡಣೆಗಾಗಿ ತಿರುಗಿತು ಪಾಂಡುಸುತ ಸೇನೆ ॥
ಮುರಿದುದಗ್ಗದ ಚೂಣಿ ನಾಯಕ ।
ರಿರಿಯಲಾತುದು ಮತ್ಸ್ಯ ಕೇಕಯ ।
ರುರುಬಿದರು ತೆಗಿಸಿದರು ಕೌರವ ಬಲದ ಮುಂಗುಡಿಯ ॥೩

ಬಲಿದ ಚಕ್ರವ್ಯೂಹದೊಡ್ಡಿನ ।
ನೆಲೆಯು ಭೇದವನರಿಯದಾ ರಿಪು ।
ಬಲವ ಕೆಡಿಸಲು ಹಾಯ್ದು ಹೊಗಿಸಿದಡನಿಲಜನು ರಥವ ॥
ಎಲೆಲೆ ತಿವಿ ತಿವಿ ಸ್ವಾಮಿದ್ರೋಹರ ।
ತಲೆಯ ತೆಗೆ ತೆಗೆಯೆನುತ ಬಿಲುಗೈ ।
ಚಳಕದಲಿ ಬೀರಿದನು ಬಾಣವನತಿರಥರ ಮೇಲೆ ॥೩

ಅನಿಲಜನ ಶರದುರವಣೆಯನಂ ।
ಬಿನಲಿ ತಳಿತರು ಸೈಂಧವಾದಿಗ ।
ಳನುವರದೊಳುರವಣಿಸಿ ಗೆಲಿದರು ವೈರಿನಾಯಕರು ॥

---

೩೪. ಮೊಗಸಿತು—ಸನ್ನದ್ಧರಾದರು, ಕಮಲಭವಾಂಡ ಖರ್ಪರ—ಬುರುಡೆಯಂತಿ
ಬ್ರಹ್ಮಾಂಡವನ್ನು, ಗಬ್ಬರಿಸಿದುದು—ಭೇದಿಸಿತು.

೩೫. ಒಡ್ಡಣೆ—ಸೇನಾವ್ಯೂಹ, ಅಗ್ಗದ ಚೂಣಿ—ಮುಂಭಾಗದ ಸೈನ್ಯ, ಮುರಿದು
ಒಡೆದು ಹೋಯಿತು, ಇರಿಯಲು—ತಿವಿಯುವುದಕ್ಕಾಗಿ, ನಾಯಕರು—ಕೌರವ ಸೇನಾನಾಯಕ
ಆತುದು—ಸಿದ್ಧರಾದರು, ಉರುಬಿದರು—ಮೇಲೆ ಬಿದ್ದರು, ಮುಂಗುಡಿ—ಮುಂಭಾಗದ ಸೇನೆ.

೩೬. ಬಲಿದ—ಕಟ್ಟಿದ, ನೆಲೆಯ ಭೇದ—ಪ್ರಮಾಣ ವಿಶೇಷ.

೩೭. ಸೈಂಧವಾದಿಗಳು ಉರವಣೆಯನು ಅಂಬಿನಲಿ, ತಳಿತರು—ಚದರಿಸಿದರು, ಅನುವ
ಯುದ್ಧ, ಅನುವನು—ರೀತಿಯನ್ನು, ಸಮರ........ಗಾಹದಲಿ—ಯುದ್ಧವೆಂಬ ಭಯಂಕರವ

ಏಸುತ ಚಕ್ರವ್ಯೂಹದಾಹವ |
ದನುವನರಿಯದೆ ಸಮರ ಭೀಕರ |
ವನಧಿಯವಗಾಹದಲಿ ಮುರಿದರು ಸಾಹಸೋನ್ನತಿಯ ||೩೭||

ಅಲುಗಿದರು ಮಾರ್ಬಲದವರು ಮನ |
ವಿಳುಹಿದರು ಭೀಮಾದಿಗಳು ಕಳ |
ವಳಿಸಿದರು ಸಾತ್ಯಕಿ ವಿರಾಟ ದ್ರುಪದ ಸೃಂಜಯರು ||
ಉಲುಕಲಮ್ಮದೆ ಪಂಚಪಾಂಡವ |
ರಳುಕಿದರು ರಣಹೂಣಿಗರು ತ |
ಲ್ಲಳಿಸಿದರು ದ್ರೋಣನ ಬಿಗುರ್ವಣೆಯರಸು ಮೋಹರಕೆ ||೩೮||

ಬಗೆಯಲಾದುದು ಹಾನಿ ಸಮರವ |
ಹೊಗಲು ಮೊಗಸುವರಿಲ್ಲಲಾ ಬಲು |
ಜಗಳ ಕಡುಹುಳ್ಳತಿರಥರು ಬೆಂಗೊಟ್ಟು ಮೊಗದಿರುಹೆ ||
ತೆಗೆವುತಿದೆ ನಿಜಸೇನೆ ಚಕ್ರವ |
ಹೊಗುವನಾವವನೆನುತ ನೃಪತಿಗೆ |
ದುಗುಡವನು ಬಿತ್ತಿದರು ಸಹದೇವಾದಿ ನಾಯಕರು ||೩೯||

ಉರವಣಿಸಿದರು ನಕುಲ ಸಾತ್ಯಕಿ |
ವರ ವಿರಾಟ ದ್ರುಪದ ಕೇಕಯ |
ಬಿರುದ ಧೃಷ್ಟದ್ಯುಮ್ನ ಕುಂತೀಭೋಜ ಮೊದಲಾದ ||
ಧರಣಿಪರು ಥಟ್ಟೈಸಿ ರಿಪು ಮೋ |
ಹರಕೆ ಕವಿದರು ಕಾದಿ ದುರ್ಗವ |
ಮುರಿಯಲರಿಯದೆ ಮುರಿವುತಿರ್ದುದು ಬಸಿವ ಮೈಗಳಲಿ ||೪೦||

---

ಸಮುದ್ರದಲ್ಲಿ ಮುಳುಗುವಿಕೆಯಿಂದ, ಸಾಹಸೋನ್ನತಿಯ, ಮುರಿದರು—ಕಳೆದುಕೊಂಡರು.

೩೮. ಮನವಿಳುಹಿದರು—ಉತ್ಸಾಹರಹಿತರಾದರು, ಉಲುಕಲಮ್ಮದೆ—ಚಲಿಸಲಾರದೆ, ರಣಹೂಣಿಗರು—ಯುದ್ಧಪ್ರತಿಜ್ಞೆ ಮಾಡಿದವರು, ಬಿಗುರ್ವಣೆಯ—ಭಯಂಕರವಾದ, ಅರಸು ಮೋಹರ—ರಾಜಸೈನ್ಯ.

೩೯. ಬಗೆಯಲು— ಆಲೋಚನೆ ಮಾಡಿದರೆ, ಮೊಗಸುವರು—ಉತ್ಸಾಹಪಡುವವರು, ಕಡುಹುಳ್ಳ—ಸಾಮರ್ಥ್ಯವುಳ್ಳ.

೪೦. ಬಿರುದ—ಬಿರುದುಳ್ಳ, ಥಟ್ಟೈಸಿ—ಗುಂಪಾಗಿ, ಮುರಿವುತಿರ್ದುದು—ಹಿಂದಿರುಗುತ್ತಿತ್ತು, ಬಸಿವ ಮೈ—ರಕ್ತ ಸುರಿವ ಮೈ.

ಸುಳಿದು ಹರಿಮೇಖಲೆಯ ಮೋಹರ |
ದೊಳಗೆ ಮುಳುಗಿದಿರ್ದೈ ಮಹಾ ಮಂ |
ಡಳಿಕರಿರ ಘಡ ಹೋಗಿ ಹೋಗಿಯೆನುತ್ತ ಖಾತಿಯಲಿ ||
ಬಿಲುದುಡುಕಿ ಪವಮಾನ ನಂದನ |
ನಳವಿಗೊಟ್ಟನು ಹೂಣೆಹೊಕ್ಕರಿ |
ಬಳವನಿರಿದನು ಗಾಯವಡೆದನು ಘೋರ ಸಮರದಲಿ ||೪೧||

ಕಾದಲೆನ್ನಳವಲ್ಲ ಬಲ ದು |
ರ್ಭೇದವಿದು ಶಿವ ಶಿವಯೆನುತ್ತ ವೃ |
ಕೋದರನು ಬೆರಗಾಗಿ ದುಗುಡವ ತೆತ್ತು ನಿಜಮುಖಕೆ ||
ಕೈದೆಗೆಯೆ ರಿಪುಬಲದ ಸುಭಟರು |
ಕಾದಿದನು ಕಲಿಭೀಮ ಗೆಲಿದನು |
ಹೋದನೆಂದುದು ಕೂಡೆ ಕೈಗಳ ಹೊಯ್ದು ತಮತಮಗೆ ||೪೨||

ಆ ಮಹಾ ಮೋಹರವನೊಡೆಯಲು |
ಸೋಮ ಕುಲಜರು ಭೀತರಾದರು |
ಹಾ ಮಹಾದೇವೆನುತ ಧರ್ಮಜ ನೋಡಿ ತಲೆದೂಗಿ ||
ರಾಮನರಿವನು ಕೃಷ್ಣನರಿವನು |
ಸೀಮೆಯಲಿ ಕಲಿಪಾರ್ಥನರಿವನು |
ಭೂಮಿಪತಿಗಳೊಳುಳಿದ ಭಟರಿಗೆ ಹರಿವುದಲ್ಲೆಂದ ||೪೩||

ಹೊಗಲು ಬಲ್ಲನು ಹೊಕ್ಕವೊಲು ಹೆರ |
ದೆಗೆಯಲರಿಯನು ರಾಯ ಪಾರ್ಥನ |
ಮಗನು ಮತ್ತಯ್ಯನೆಯ ಮಹಿಮರ ಕಾಣೆ ನಾನೆನುತ ||

---

೪೧. ಹರಿ ಮೇಖಲೆಯ ಮೋಹರ–ಕುದುರೆಗಳು ಸುತ್ತಿರುವ ಸೈನ್ಯ, ಬಿಲುದುಡುಕಿ–ಬಿಲ್ಲನ್ನು ತೆಗೆದುಕೊಂಡು, ಅಳವಿಗೊಟ್ಟನು–ಪ್ರತಿಭಟಿಸಿ ನಿಂತನು, ಹೂಣೆಹೊಕ್ಕು–ಪ್ರತಿಜ್ಞೆ ಮಾಡಿಕೊಂಡು.

೪೨. ದುಗುಡವ ತೆತ್ತು–ದುಃಖವನ್ನು ತಂದುಕೊಂಡು, ಕೈದೆಗೆಯೆ–ಹಿಮ್ಮೆಟ್ಟಲು, ರಿಪುಬಲದ ಸುಭಟರು (ಎಂದರು).

೪೩. ಹರಿವುದಲ್ಲ–ಭೇದಿಸಲಾಗದು.

೪೪. ಹೊಕ್ಕವೊಲು–ಹೋದಹಾಗೆ. ಹೆರದೆಗೆಯಲು–ಈಚೆಗೆ ಬರಲು, ರಾಯ–

ಅಗಿವ ಚಿಂತೆಯೊಳರಸ ವದನದ |
ದುಗುಡ ಭಾರದಲಿರಲು ಮುಂಗೈ |
ನಿಗಳವನು ತಿರುಹುತ್ತ ನಸು ನಗುತಿದ್ದನಭಿಮನ್ಯು ||೪೪||

ಜನಪನಂಘ್ರಿಗೆ ಮಣಿದು ಕೈಮುಗಿ |
ದೆನಗೆ ಬೆಸಸೈ ಬೊಪ್ಪ ನಾ ಬ |
ಲ್ಲೆನು ಮಹಾಹವದೊಳಗೆ ಚಕ್ರವ್ಯೂಹ ಭೇದನವ ||
ಅನುವರವ ಗೆಲುವೆನು ಕೃತಾಂತನ |
ಮನೆಗೆ ಕಳುಹುವೆನಹಿತರನು ನೀ |
ವಿನಿತು ಚಿಂತಿಸಲೇಕೆ ಕಾಳೆಗಕೆನ್ನ ಕಳುಹೆಂದ ||೪೫||

ಹಸುಳೆಯಧಟಿನ ನುಡಿಯ ಕೇಳಿದು |
ನಸುನಗುತ ಧರ್ಮಜನು ಘನ ಪೌ |
ರುಷವು ನಿನಗುಂಟೆನುತ ತನಯನ ತೆಗೆದು ಬಿಗಿಯಪ್ಪಿ ||
ಶಿಶುವು ನೀನೆಲೆ ಮಗನೆ ಕಾದುವ |
ರಸಮ ಬಲರು ಕಣಾ ಮಹಾರಥ |
ರೆಸುಗೆಗಳ ನೀನೆಂತು ಸೈರಿಸಲಾಪೆ ಹೇಳೆಂದ ||೪೬||

ಜವನ ಜಕ್ಕುಲಿಸುವರನೇಕರು |
ಶಿವನ ಸಮುಗ್ಗೆ ವೀರರಹರದು |
ನವಗೆ ಸಹಿತಳವಲ್ಲ ನೀನೆಂತೆಲ್ಲ ಪಟುಭಟರ ||
ತಿವಿದು ಹೊಗುವೈ ಮಗನೆ ನಿನ್ನು |
ತ್ಸವದ ನುಡಿಯೇ ಸಾಕೆನುತ ತ |
ಕ್ಕನಿಸಿ ಮೋಹದ ಕಡಲೊಳವನಿಪ ಮೂಡಿ ಮುಳುಗಿದನು ||೪೭||

---

ರಾಯನೇ, ಅಗಿವ—ಹೆದರಿಕೆಯಿಂದ ಕೂಡಿದ, ಮುಂಗೈ ನಿಗಳ—ಕೈಬಳೆ.

೪೫. ಮಣಿದು—ನಮಸ್ಕರಿಸಿ, ಕೃತಾಂತ—ಯಮ—(ಮರಣವನ್ನುಂಟು ಮಾಡುವವನು)

೪೬. ಅಧಟಿನ—ಪರಾಕ್ರಮದ, ಕೇಳಿದು—ಕೇಳ್ದು, ಎಸುಗೆ—ಬಾಣಪ್ರಯೋಗ.

೪೭. ಜಕ್ಕುಲಿಸುವರು—ತಿರಸ್ಕರಿಸುವವರು, ನವಗೆ—ನಮಗೆ, ಮೂಡಿ ಮುಳುಗಿದನು—ತೇಲಿ ಮುಳುಗಿದನು.

ಇವರ ಗೆಲುವೆನು ನಿಂದ ರಿಪುವನು |
ಜವಗೆ ಬೋನವ ಮಾಡದಿರ್ದೊಡೆ |
ಬವರವನು ಕಲಕದೆ ಮಹಾರಥರೆನಿಪ ನಾಯಕರ ||
ಅವನಿಗೊಗ್ಗೊರಗಿಸದೆ ಮಾರಾಂ |
ತವರ ನುಂಗದೊಡಾ ಬಳಿಕ ನಿ |
ಮ್ಮವಗೆಯರ್ಜುನಗೆಂತು ಜನಿಸಿದೆನೆನಗೆ ಬೆಸಸೆಂದ ||೪೮||

ಮಗನೆ ರಾಯರ ದಳಕೆ ನಿನ್ನನು |
ಮಗುವನರಿದರಿದೆಂತು ಕಳುಹುವ |
ಬಗೆಯ ತಹೆನೈ ಭೀಮ ಪೇಳ್ ಶಿಶುವಿಂಗೆ ಬುದ್ಧಿಯನು ||
ಅಗಣಿತದ ರಿಪು ಕಟಕ ಮೋರೆಯ |
ವಿಗಡರಿದಿರಿಗೆ ಕಳುಹಲಾರೆನು |
ಹಗೆಯ ಗೆಲುವುದು ನಿಲಲಿ ಧರಣಿಯನೊಲ್ಲೆನಾನೆಂದ ||೪೯||

ಏಕೆ ನಿಮಗಿದಿರಾದ ವೈರಿಯ |
ನೂಕುವೆನು ವೀಳೆಯವ ಕೊಡು ನೀ |
ಕಾಕಬಳಸುವ ಹಿರಿದ ಗಳಹುವಡೆಮಗೆ ತಮಗೆನುತ ||
ನೂಕಿ ನೋಡುವುದೆನುತ ಕರಿ ಕಮ |
ಲಾಕರವ ಕಲಕುವವೊಲೀಗಳು |
ಲೋಕವನು ಬೆದರಿಸುವ ಭಾಷೆಯ ಬರಸಿ ಕಳುಹೆಂದ ||೫೦||

ಬೇಡ ಮಗನೇ ವೈರಿನಾಯಕ |
ವಾಡಿಗಳು ವೆಗ್ಗಳರು ನಿನ್ನನು |
ಬೇಡಿಕೊಂಬೆನು ಕಳುಹಲಾರೆನು ನಿನಗೆ ತೀರುವುದೆ ||

---

೪೮. ಬೋನ—ಆಹಾರ, ಒಗ್ಗೊರಗಿಸದೆ—ಗುಂಪಾಗಿ ಮಲಗಿಸದೆ.

೪೯. ಅರಿದರಿದು—ತಿಳಿದು ತಿಳಿದು, ಬಗೆಯ ತಹೆನೈ—ಮನಸ್ಸು ಮಾಡಲಯ್ಯಾ! ಮೋರೆಯ ವಿಗಡರ—ಭಯಂಕರವಾದ ಮುಖವುಳ್ಳವರ.

೫೦. ವೀಳೆಯ—ವೀಟಿಕಾ (ಸಂ.), ಎಮಗೆ ತಮಗೆನುತ, ಕಾಕಬಳಸುವ—ಗರ್ವದ ಧ್ವನಿವಿಕಾರವನ್ನು ತೋರಿಸುವ, ಹಿರಿದ—ಹೆಚ್ಚು ಮಾತನ್ನು, ಗಳಹುವಡೆ—ಹರಟಿದರೆ, ನೂಕಿ ನೋಡುವುದು—ಮುಂದೆ ಬಂದು ನೋಡಿ, ಎನುತ.

೫೧. ನಾಯಕ ವಾಡಿಗಳು— ಸೇನಾಪತಿ ಶ್ರೇಷ್ಠರು, ಕಾಣಲಾರೆನು— ನೋಡಿ

ನೋಡನೋಡಲು ಕೊಲುವ ಮಾರಿಯ |
ಕೇಡನಾನಿದ ಕಾಣಲಾರೆನು |
ಕಾಡದಿಹುದೈ ಕಂದ ನೀನೆನುತಿರ್ದನಾ ಭೀಮ ||೩೧||

ಮುಡಿಯ ಸಂತೈಸುತ್ತ ಪಾರ್ಥನ |
ಮಡದಿ ಹರಿತಂದಳು ಕುಮಾರನ |
ಹಿಡಿದು ಬಿಗಿಯಪ್ಪಿದಳು ಮರಣವ ನೆನೆವರೈ ಮಗನೆ ||
ಮಿಡುಕಲಮ್ಮರು ಹಿರಿಯ ತಂದೆಯ |
ರಡಬಳಿಗ ಮೋಹರಕೆ ಬಹುದೆ |
ಕಡು ಮನದ ಕಾತರಿಗತನ ಬೇಡೆಂದಳಾ ಜನನಿ ||೩೨||

ತಡೆಯಲಹುದೇ ತಾಯೆ ರಿಪುಗಳ |
ತಡೆಗಡಿದು ಸುಖಿಯಾಗು ರಣದು |
ಗ್ಗಡದ ಸುಭಟರ ಜಯಿಸು ಕಾಳಗದೊಳಗೆ ನೀನೆಂದು ||
ಹಿಡಿದ ಛಲವನು ಗೆಲಿದು ಜಯಸಿರಿ |
ಗೊಡೆಯನಾಗೆಂದೆನ್ನ ಹರಸದೆ |
ಯೆಡೆಯೊಗುವರೇ ತಾಯೆ ನೀನೆನುತಿರ್ದನಭಿಮನ್ಯು ||೩೩||

ಕಲಕುವೆನು ಭಟಸಾಗರವನಂ |
ಡಲೆವೆನಹಿತ ಕುಮಾರ ಶತಕದ |
ತಲೆಯನರಿವೆನು ಸುರರುಘೇ ಎನೆ ಬೀದಿವರಿವರಿದು ||
ಗೆಲವ ಸೂರೆಯ ಕೊಂಡೆನಿಂದಿನ |
ಬಲವನಾಂ ಮನ್ನಿಸಿದೆನಾದೊಡೆ |
ಫಲುಗುಣಗೆ ನಿನಗೆಂತು ಜನಿಸಿದೆ ತಾನು ಹೇಳೆಂದ ||೩೪||

---

ಸಹಿಸಲಾರೆನು.

೩೨. ಮುಡಿ—ತಲೆಗಂಟು; ಮುಡಿಯ ಸಂತೈಸುತ್ತ—ತಲೆಯನ್ನು ಸವರುತ್ತ; ಹರಿತಂದಳು—ಓಡಿಬಂದಳು; ಮಿಡುಕಲಮ್ಮರು—ನಿಲ್ಲಲಾರರು; ಹಿರಿಯ ತಂದೆಯರು—ದೊಡ್ಡಪ್ಪಂದಿರು; ಅಡಬಳಿ—ಹಾನಿ; ಅಡಬಳಿಗ ಮೋಹರ—ನಾಶಕರವಾದ ಯುದ್ಧ. ಕಡು—ಕಠಿನವಾದ; ಕಾತರಿಗತನ—ದುಡುಕು.

೩೩. ತಡೆ—ಅಡ್ಡಿಯನ್ನು; ಉಗ್ಗಡ—ಉತ್ಕಟ (ಸಂ.); ಎಡೆಯೊಗುವರೇ—ಅಡ್ಡಿ ಮಾಡುವರೆ ?

೩೪. ಅಂಡಲೆವೆನು—ಹಿಂಸಿಸುವೆನು; ಅರಿವೆನು—ಕತ್ತರಿಸುವೆನು; ಸುರರು ಉಘೇ ಎನೆ, ಬೀದಿವರಿವರಿದು—ಸುಗ್ಗಿ ಸುಗ್ಗಿ; [illegible] ಮನ್ನಿಸಿದೆನಾದೊಡೆ—ಬಿಟ್ಟುಬಿಟ್ಟರೆ.

ತುಡುಕಿ ವಜ್ರವ ವಾಸವನು ತ |
ನ್ನೊಡನೆ ಸಮರಕೆ ಬರಲಿ ಮೇಣ್ ಕೆಂ |
ಗೊಡಲಿ ಗೊರವನು ಖಾತಿಯಲಿಯಿದಿರಾಗಿ ಹರಿತರಲಿ ||
ಕಡಲೊಳೊರಗುವ ಕೃಷ್ಣನರ್ಜುನ |
ನೊಡನೆ ಸಮರಕೆ ಬರಲಿ ಗೆಲವನು |
ಪಡೆಯದಿರ್ದೊಡೆ ನಿನ್ನ ಮಗನೇ ತನ್ನ ಕಳುಹೆಂದ ||೫೫||

ಸುಳಿಯಬಹುದಂಬುಧಿಯ ನಡುವಣ |
ಸುಳಿಯೊಳಾ ಸಂವರ್ತಕನ ಕಣ |
ನೊಳಗೆ ಸುಳಿಯಲು ಬಹುದು ಮೃತ್ಯುವಿನಣಲ ಹೊಳಲೊಳಗೆ ||
ಹೊಳಕಬಹುದಹಿಪತಿಯ ಮಣಿಮಂ |
ಡಲದೊಳಾನಲು ಬಹುದು ಕಾಣೆನು |
ಗೆಲುವ ಹದನನು ನಮಗೆ ಪದ್ಮವ್ಯೂಹ ಭೇದನವ ||೫೬||

ಬಿಡು ಮರೀಚಿಯ ತೊರೆಗೆ ಹರುಗೋ |
ಲಿಡುವರುಂಟೇ ಲೆಪ್ಪದುರಗನ |
ಹಿಡಿಯಲೇಕ್ಕೆ ಗರುಡಮಂತ್ರವು ಚಪಳನೆನ್ನದಿರು ||
ಕೊಡನ ಮಗನ ಕುಮಂತ್ರದೊಡ್ಡಿನ |
ಕಡಿತಕಾನಂಜುವೆನೆ ವೆಗ್ಗಳ |
ನುಡಿಯಲಮ್ಮೆನು ತನ್ನನೀಗಳೆ ಬಿಟ್ಟು ನೋಡೆಂದ ||೫೭||

---

೫೫. ವಜ್ರ–ವಜ್ರಾಯುಧ, ವಾಸವ–ಇಂದ್ರ, ಕೆಂಗೊಡಲಿ ಗೊರವ–ಕೆಂಪು ಕೊಡಲಿಯುಳ್ಳ ಶಿವ, ಖಾತಿ–ಕೋಪ, ಕಡಲೊಳೊರಗುವ–ಕ್ಷೀರಸಮುದ್ರಶಾಯಿಯಾದ. (ಕೆಂಗೊಡಲಿ–ಕೆಚ್ಚನೆ+ಕೊಡಲಿ)

೫೬. ಸಂವರ್ತಕನ–ಪ್ರಳಯಕಾಲದ ರುದ್ರನ, ಕಣ–ರಣಭೂಮಿ, ಅಣಲ–ಗಂಟಲೆಂಬ, ಹೊಳಲು–ಪಟ್ಟಣ, ಹೊಳಕಬಹುದು–ಕಾಣಿಸಿಕೊಳ್ಳಬಹುದು, ಅಹಿಪತಿ–ಆದಿಶೇಷ, ಮಣಿಮಂಡಲ–ಹೆಡೆಯಲ್ಲಿರುವ ರತ್ನಗಳ ಗುಂಪು, ಆನಲು–ಒಡ್ಡಲು.

೫೭. ಮರೀಚಿಯ ತೊರೆ–ಬಿಸಿಲ್ದೊರೆ, ಲೆಪ್ಪದುರಗ–ಮೇಣಮೊದಲಾದುವುಗಳಿಂದ ಮಾಡಿದ ಹಾವು, ಕೊಡನ ಮಗ–ದ್ರೋಣ–(ಕಲಶೋದ್ಭವ), ಕುಮಂತ್ರದೊಡ್ಡಿನ–ದುರಾಲೋಚನೆಯಿಂದ ರಚಿಸಿದ ಸೇನೆಯ, ವೆಗ್ಗಳ ನುಡಿಯುಲಮ್ಮೆನು–ಹೆಚ್ಚಾಗಿ ಹೇಳಲಾರೆನು.

ಕಂದ ವೈರಿವ್ಯೂಹ ಸಮದಳ |
ವೆಂದುದಲ್ಲದರೊಳಗೆ ಕೃಪ ಗುರು |
ನಂದನರು ರಾಧೇಯ ಭೂರಿಶ್ರವ ಜಯದ್ರಥರು ||
ಇಂದುಧರನಡಹಾಯ್ದೊಡೊಮ್ಮೆಯೆ |
ಹಿಂದುಮುಂದೆನಿಸುವರು ನೀ ಗೆಲು |
ವಂದವೇನೈ ಸಮರವಿದು ಸಾಮಾನ್ಯವಲ್ಲೆಂದ ||೪೮||

ಗಾಳಿ ಬೆಮರವುದುಂಟೆ ವಹ್ನಿ |
ಜ್ವಾಲೆ ಹಿಮಕಂಜುವುದೆ ಮಂಜಿಗೆ |
ಮೇಲುಗಾಳಿಗವುಂಟೆ ಬಲುಬೇಸಗೆಯ ಬಿಸಿಲೊಳಗೆ ||
ಬಾಲಸಿವನೇನೆಂದವಜ್ಞೆಯ |
ತಾಳಲಾಗದು ಬೊಪ್ಪ ನಿಮ್ಮಡಿ |
ಯಾಲಿಗೌತಣವಿಕ್ಕಿ ತೋರುವೆನೊರಸಿ ರಿಪುಬಲವ ||೪೯||

ಅಹುದು ಮಗನೆ ಸಮಗ್ರಬಲ ನೀ |
ಸಹೆ ನಿಧಾನಿಸಲಿಂದು ಪವನಜ |
ನಹವ ಮುರಿದರು ಕಾಯ್ದುಬಿಟ್ಟರು ನಕುಲ ಸಾತ್ಯಕಿಯ ||
ಸಹಸಿ ದ್ರುಪದ ವಿರಾಟರುಗಳು |
ಮ್ಮಹವ ಮುರಿದರು ವಿಜಯ ಗರ್ವಿತ |
ರಿಹ ಬಲವ ನೀನೊಬ್ಬನೇ ಸಾಧಿಸುವುದರಿದೆಂದ ||೫೦||

ಧರಣಿಪತಿ ಕೇಳುಳಿದ ಪುಷ್ಪದ |
ಪರಿಮಳವು ಫಲಿಸಿದಡೆ ಸಂಪಗೆ |
ಯರಳ ಪರಿಮಳ ಪಥ್ಯವೇ ತುಂಬಿಗಳ ತಿಂಥಿಣಿಗೆ ||

---

೪೮. ಸಮದಳವೆಂದುದಲ್ಲ—ಸಾಮಾನ್ಯವಾದ ಸೈನ್ಯವಲ್ಲ, ಗುರುನಂದನ—ಅಶ್ವತ್ಥಾಮ. ರಾಧೇಯ—ಕರ್ಣ (ರಾಧೆಯ ಸಾಕುಮಗ), ಇಂದುಧರನು—ಶಿವ, ಅಡಹಾಯ್ದೊಡೆ—ಎದುರು ನಿಮ್ತು ಬಿದ್ದರೆ, ಒಮ್ಮೆಯೆ—ಒಂದೇ ಸಾರಿ.

೪೯. ಮೇಲುಗಾಳಿಗ – (ಬಿಸಿಲಿನ) ಮೇಲೆ ಬಿದ್ದು ಯುದ್ಧ, ಅವಜ್ಞೆ – ತಿರಸ್ಕಾರ, ನಿಮ್ಮಡಿಯ—ನಿಮ್ಮ, ಆಲಿಗೆ-ಕಣ್ಣಿಗೆ, ಒರಸಿ—ಅಳಿಸಿ.

೫೦. ಅಹವ—ಗರ್ವವನ್ನು, ಉಮ್ಮಹ—ಬಲ: ಗರ್ವ—ಉನ್ಮದ (ಸಂ.).

೫೧. ಫಲಿಸಿದಡೆ—ಅನುಕೂಲವಾದರೆ, ಅರಳ—ಹೂವಿನ, ಪಥ್ಯವೇ—ಹಿತವೇ ? ತಿಂಥಿಣಿ—

ಅರಿಬಲವ ನೀ ಖಂಡಿಪುದು ಮೋ |
ಹರ ಸಹಿತ ತಾ ಬಹೆನು ನಡೆಯೆಂ |
ದರಸನಭಿಮನ್ಯುವಿಗೆ ನೇಮವ ಕೊಟ್ಟನಾಹವಕೆ ||೬೪||
ಇಂದು ಹರಸಿಯೆ ಕಳುಹುವುದು ಬೇ |
ಡೆಂದೊಡೆಯು ರಿಪುಬಲದ ಸುಭಟರ |
ಕೊಂದಡಲ್ಲದೆ ಮಾಣ್ದೆನಾದಡೆ ನಿಮ್ಮ ಮೇಲಾಣೆ ||
ಎಂದು ಪಾದಕ್ಕೆರಗಿ ಭೀಮನ |
ವಂದಿಸುತ ಸಹದೇವ ನಕುಲರಿ |
ಗಿಂದುಮುಖಿಯರಿಗೆರಗಿ ನೇಮವ ಕೊಂಡು ತಾ ನಿಂದ ||೬೫||
ಶಿವ ಶಿವಾ ಶಿಶುವಿವನು ರಿಪುಗಳು |
ಜವನ ಜೂಜೆನಿಸುವ ಮಹಾರಥ |
ನಿವಹವೊಬ್ಬಗೆ ಗಡ ಸಮಾಹಿತವಲ್ಲ ಸಮರಂಗ ||
ಅವನಿಪತಿ ನಿರ್ದಯನಲಾ ಕಂ |
ಡೆವೆ ಕುಮಾರನನಿಕ್ಕಿಬಹ ರಾ |
ಜ್ಯವನು ಸುಡು ಸುಡಮೇತಕೆಂದುದು ನಿಖಿಳ ಪರಿವಾರ ||೬೬||
ಲಲಿತ ಚಂದ್ರಿಕೆಯೊಡನೆ ದಾವಾ |
ನಳನ ಖಾಡಾಖಾಡಿ ಸುರಲತೆ |
ಯೆಳೆಯ ಕುಡಿ ಮುರಿದೊತ್ತಲಾಪುದೆ ವಜ್ರಧಾರೆಯನು ||
ನಳಿನ ನಾಳವು ಗಜದ ಕೈಯೊಡ |
ನಳವಿಗೊಡಲಂತರವೆ ಪಾಪಿಗ |
ಳೆಳಮಗನ ಕಳುಹಿದರು ಕಾಳೆಗಕೆಂದುದಮರಗಣ ||೬೭||

---

ಯನ್ನು ಪ್ರತಿಭಟಿಸಿ ಹಿಂದಕ್ಕೆ ಬರಬೇಕಾದರೆ ಅವರ ಹಿಂದಣ ಜನ್ಮಗಳ ಪುಣ್ಯವಲ್ಲವೆ? ನೇಮ—ನಿಯಮ (ಸಂ).

೬೫. ಬೇಡೆಂದಡೆಯು—(ನೀವು) ಬೇಡವೆಂದು ಹೇಳಿದರೂ, ಮಾಣ್ದೆನಾದಡೆ—ಬಿಟ್ಟರೆ.

೬೬. ಜವನ ಜೂಜೆನಿಸುವ—ಯಮನೊಡನೆ ಹೋರಾಡತಕ್ಕ, ಮಹಾರಥ ನಿವಹವು ಒಬ್ಬಗೆ—ಒಬ್ಬನಿಗೆ, ಸಮರಂಗ—ಎದುರುಕಟ್ಟು, ಸಮಾಹಿತವಲ್ಲ—ಸರಿಯಾಗೇರ್ಪಟ್ಟಿಲ್ಲ, ಕಂಡೆವೆ—ಕಂಡು ಕಂಡು.

೬೭. ಖಾಡಾಖಾಡಿ—ಮಲ್ಲಯುದ್ಧ; ಸುರಲತೆಯ—ಕಲ್ಪಲತೆಯ, ವಜ್ರಧಾರೆ—ವಜ್ರಾಯುಧದ ಮೊನೆ, ನಾಳ—ದಂಟು, ಅಳವಿಗೊಡಲು—ಹೋರಾಡಲು, ಅಂತರವೆ—ಸಾಧ್ಯವೆ?

ಬಿಗಿದು ಗಂಡುಡಿಗೆಯನು ಹೊನ್ನಾ |
ಯುಗದ ಹೊಳೆವ ಕಠಾರಿಯನು ಮೊನೆ |
ಮುಗುಚಿ ಸಾದು ಜವಾಜಿ ಕತ್ತುರಿ ಗಂಧಲೇಪದಲಿ ||
ಮಘಮಘಿಪ ಹೊಂದೊಡರ ಹೀರಾ |
ಳಿಗಳನೊಪ್ಪಂಬಡೆದು ಕಿರುನಗೆ |
ಮೊಗದ ಸೊಂಪಿನೊಳಾಹವಕ್ಕನುವಾದನಭಿಮನ್ಯು ||೬೮||

ಉಲಿವ ಘಂಟೆಯ ಕುಣಿವ ತುರಗಾ |
ವಳಿಯ ಗಗನದಲಗಿವ ಬಿರುದಿನ |
ಪಳಹರದ ತೆತ್ತಿಸಿದ ಕನಕದ ಚೌಕ ಸತ್ತಿಗೆಯ ||
ಘುಳುಘುಳಿಪ ಚೀತ್ಕಾರ ಕೋಳಾ |
ಹಳದ ಸೂತನ ರೇಖೆಯಲಿ ಭಟ |
ಕುಲ ಲಲಾಮನ ತೇರು ಬಂದುದು ತೀವಿದಸ್ತ್ರದಲಿ ||೬೯||

ತುರಗ ತತಿಗಭಿನಮಿಸಿ ರಥವನು |
ತಿರುಗಿ ಬಲವಂದೇರಿ ಚಾಪಕೆ |
ಶರವ ನೊಸಲನು ಚಾಚಿ ಭಾರಿಯ ಭುಜವನೊದರಿಸುತ ||
ಅರಸನನು ವಂದಿಸುತ ಭೀಮನ |
ಹರಕೆಯನು ಕೈಕೊಳುತ ನಕುಲಾ |
ದ್ಯರಿಗೆ ಪೊಡಮಟ್ಟೇರಿದನು ನವರತ್ನಮಯ ರಥವ ||೭೦||

---

೬೮. ಹೊನ್ನಾಯುಗದ – ಚಿನ್ನದ ಹಿಡಿಯುಳ್ಳ, ಮೊನೆ ಮುಗುಚಿ– ಮೊನೆಯನ್ನು ಮುಚ್ಚಿ–ಒರೆಯಲ್ಲಿಟ್ಟುಕೊಂಡು, ಸಾದು–ಪರಿಮಳಗಂಧ, ಕತ್ತುರಿ–ಕಸ್ತೂರಿ (ಸಂ.) ಹೊಂದೊಡರು–ಚಿನ್ನದ ಆಭರಣ, ಹೀರಾಳಿ–ವಜ್ರದ ಸಮೂಹ, ಒಪ್ಪಂಬಡೆದು–ಅಲಂಕರಿಸಿಕೊಂಡು.

೬೯. ಅಗಿವ–ಅಲ್ಲಾಡುವ, ಬಿರುದಿನ ಪಳಹರ–ಬಿರುದಿನ ಧ್ವಜಪಟ ತೆತ್ತಿಸಿದ–ಕೆತ್ತಿರುವ, ಚೌಕ ಸತ್ತಿಗೆ–ಚೌಕವಾದ ಕೊಡೆ, ಸತ್ತಿಗೆ–ಛತ್ರಿಕಾ (ಸಂ.), ಸೂತನ ರೇಖೆಯಲಿ–ಸಾರಥಿಯು ನಡೆಯಿಸುವ ಮಾರ್ಗದಲ್ಲಿ, ಭಟಕುಲ ಲಲಾಮ–ಯೋಧಾಗ್ರೇಸರ.

೭೦. ಬಲವಂದು–ಪ್ರದಕ್ಷಿಣೆಮಾಡಿ ಚಾಪ–ಧನಸ್ಸು.

ಸೂಳವಿಸಿದುವು ಲಗ್ಗೆಯಲಿ ನಿ |
ಸ್ಸಾಳ ತತಿ ಸಿಡಿಲೊದರುವವೊಲು |
ಬ್ಬಾಳುಗಳು ಕೈನೆಗಹಿ ಕೈವಾರಿಸುತ ಗಮಕಿಗಳು ||
ಸಾಲ ಹೆಗ್ಗಾಳೆಗಳು ರಿಪು ಭೂ |
ಪಾಲಕರ ಬೈಬೈದು ಗಜರಿದ |
ವಾಳುತನದಾಳಾಪ ಬೀರಿತು ಬೆಗಡನಹಿತರಿಗೆ ||೨೧||

ಒಡನೆ ಕಳುಹುತ ಬಂದನಾ ನೆಲ |
ದೊಡೆಯನನುಜರು ಸಹಿತ ತನಯನ |
ಬಿಡುವನಿಯ ಸಾಲಿನಲಿ ನೆನೆವುತ ಬಂದು ಕಿರಿದೆಡೆಯ ||
ನಡೆ ವಿಜಯನಾಗೆಂದು ತನುವನು |
ತಡವಿದನು ಕಡು ಮೋಹದೆಡೆಯಲಿ |
ಘುಡುಘುಡಿಸಿ ಶಿಶು ಬೀಳುಕೊಂಡನು ಪಿತೃಚತುಷ್ಟಯವ ||೨೨||

ಎಲೆ ಕುಮಾರಕ ಹರ ಕುಮಾರಂ |
ಗಳವಿಯಲಿ ನಿಲಲರಿದು ಕೊರಳಿನ |
ಬಲುಹನರಿಯದೆ ಗಿರಿಯ ಹೊರಲಂಘೈಸುವರೆ ಭಟರು ||
ಬಲು ಗಡಿಯನೀ ದ್ರೋಣನೀ ಕೃಪ |
ನಲಘು ಭುಜಬಲ ಭಾನುಸುತನ |
ಗ್ಗಳೆಯ ಸೈಂಧವನೆಂದು ಸಾರಥಿ ತೂಗಿದನು ಶಿರವ ||೨೩||

---

೨೧. ಸೂಳವಿಸಿದುವು—ಶಬ್ದ ಮಾಡಿದುವು, ಲಗ್ಗೆಯಲಿ—ಗುಂಪಾಗಿ, ಉಬ್ಬಾಳು—ಕೊಬ್ಬಿದ ಆಳುಗಳು, ಗಮಕಿಗಳು—ಹೊಗಳುವ ಭಟ್ಟರು, ಕೈವಾರಿಸುತ—ಹೊಗಳುತ್ತ, ಹೆಗ್ಗಾಳೆ—ಹಿರಿದು ಕಾಳೆ (ಕಹಳೆ), ಆಳುತನದಾಲಾಪ—ವೀರವಾಕ್ಯ, ಬೆಗಡು—ಭಯ.

೨೨. ಆ ನೆಲದೊಡೆಯನು ಅನುಜರು ಸಹಿತ ತನಯನ ಕಳುಹುತ ಒಡನೆ ಬಂದನು. ಬಿಡುವನಿ—ಸುರಿಸುತ್ತಿರುವ ಕಣ್ಣೀರು, ಕಿರಿದೆಡೆಯ ಬಂದು—ಸ್ವಲ್ಪ ದೂರ ಬಂದು, ಘುಡುಘುಡಿಸಿ—ಉತ್ಸಾಹದೊಡನೆ.

೨೩. ಹರ ಕುಮಾರಂಗೆ—ಷಣ್ಮುಖನಿಗೆ (ಕೂಡ), ಅಳವಿಯಲಿ—ಪ್ರತಿಭಟಿಸಿ, ಅರಿದು—ಸಾಧ್ಯವಲ್ಲ, ಬಲುಹ—ಬಲವನ್ನು, ಅಂಘೈಸುವರೆ—ತೊಡಗುವರೆ ? ಬಲು ಗಡಿಯನು—ಬಹಳ ಬಲಿಷ್ಠನು.

ಮರುಳು ಸಾರಥಿ ನಮ್ಮ ನಾವುಪ |
ಚರಿಸಿಕೊಳಲಾಗದು ಕಣಾ ನೀ |
ನರಿಯೆ ನಮ್ಮಂತರವ ನಾವಿನ್ನೆಂದು ಫಲವೇನು ||
ಗುರುತನುಜನೇ ಕೃಪನೆ ದ್ರೋಣನೆ |
ತರಣಿಸುತನೇ ಸೈಂಧವನೆ ಹುಲು |
ನರರು ಗಣ್ಯವೆ ಕೇಳು ಭಾಷೆಯನೆಂದನಭಿಮನ್ಯು ||೨೪||

ಬವರವಾದಡೆ ಹರನ ವದನಕೆ |
ಬೆವರ ತಹೆನವಗಡಿಸಿದಡೆ ವಾ |
ಸವನ ಸದೆವೆನು ಹೊಕ್ಕಡಹುಡೆಸುವೆನು ಭಾರ್ಗವನ ||
ಜವನ ಜವಗೆಡಿಸುವೆನು ಸಾಕಿ |
ನ್ನವರಿವರಲೇನರ್ಜುನನು ಮಾ |
ಧವನು ಮಲೆತೊಡೆ ಗೆಲುವೆನಂಜದೆ ರಥವ ಹರಿಸೆಂದ ||೨೫||

ಬಾಲನೆನ್ನದಿರೆನುತ ರಿಪುಭಟ |
ಭಾಳಲೋಚನನೆನಿಸುವರ್ಜುನಿ |
ಬಾಳುಗೆನುತುದ್ದಂಡ ಕೋದಂಡವನು ಜೇವಡೆಯೆ ||
ಮೇಲು ಜಗವಲ್ಲಾಡಿದುವು ಕೊರ |
ಳೋಳಿಗೆದರಲು ಕುಸಿದನಹಿ ಪಾ |
ತಾಳಗೂಳೆಯುದೆಗೆಯಲಳ್ಳಿರಿಯಿತ್ತು ಬಿಲುರಭಸ ||೨೬||

ಎನಲು ಸಾರಥಿ ಹಿಗ್ಗಿ ವಿಜಯನ |
ತನಯನನು ಕೊಂಡಾಡಿ ನಿನ್ನಯೆ |
ಮನವ ನೋಡಲು ನುಡಿದೆಸಲ್ಲದೆ ಮೂರು ಲೋಕದಲಿ ||

---

**೨೪.** ಅಂತರ—ಹೆಚ್ಚಿಗೆ, ಭಾಷೆ—ಪ್ರತಿಜ್ಞೆ.

**೨೫.** ಬವರ—ಯುದ್ಧ, ಬೆವರನ್ನು ತಹೆನು—ತರುವೆನು, ಅವಗಡಿಸಿದಡೆ—ಪ್ರತಿಭಟಿಸಿದರೆ, ವಾಸವ—ಇಂದ್ರ, ಹೊಕ್ಕಡೆ—(ಯುದ್ಧಕ್ಕೆ) ಹೊಕ್ಕರೆ, ಭಾರ್ಗವ—ಪರಶುರಾಮ, ಜವ—ಶಕ್ತಿ.

**೨೬.** ಬಾಲನು ಎನ್ನದಿರು, ಅರ್ಜುನಿ—ಅರ್ಜುನನ ಮಗನು—ಅಭಿಮನ್ಯು, ಬಾಳುಗೆ—(ಶತ್ರುಗಳು) ಬದುಕಲಿ (ನೋಡೋಣ), ಉದ್ದಂಡ—ಬಲವಾದ, ಜೇವಡೆಯೆ—ಬಿಲ್ಲಿನ ಹಗ್ಗವನ್ನು ಮಿಡಿಯಲು, ಮೇಲು ಜಗ — ಸ್ವರ್ಗಲೋಕ, ಕೊರಳೋಳಿ — ಕುತ್ತಿಗೆಯ ಸಾಲು, ಅಹಿ—ಆದಿಶೇಷ, ಪಾತಾಳಗೂಳೆಯುದೆಗೆಯಲು—ಪಾತಾಳದಲ್ಲಿಯ ಕೋಳೆಯನ್ನು ಕಿತ್ತುಹಾಕುವಂತೆ, ಅಳ್ಳಿರಿಯಿತ್ತು—ನಡುಗಿಸಿತು.

**೨೭.** ವಿಜಯನ — ಅರ್ಜುನನ, ನರ — ಅರ್ಜುನ, ನೆಗಳಿದ — ಮೇಲಕ್ಕೆತ್ತಿ,

ನಿನಗೆ ಸರಿಯಹ ವೀರನಾವವ ।
ನೆನುತ ರಥವನು ನಡಿಸೆ ನರ ನಂ ।
ದನನು ಚಾಪಕೆ ನಮಿಸಿ ನೆಗಹಿದು ತಿರುಪನೇರಿಸಿದ ॥೨೭॥

ಸುರನದಿಗೆ ಶಿವನಾಯ್ತು ಮಕರಾ ।
ಕರಕೆ ಕಲಶಜನಾಯ್ತು ತರಣಿಗೆ ।
ಅರಿ ವಿಧುಂತುದನಾಯ್ತು ರಥಪಥ ತಳಿತುದವನಿಯಲಿ ॥
ಅರರೆ ಸತ್ವ ರಜಸ್ತಮಂಗಳೊ ।
ಳೆರಡು ಗುಣವಡಗಿತು ರಜೋಗುಣ ।
ದುರುಳಿಯಾದುದು ಲೋಕವೆನೆ ಗಾಢಿಸಿತು ಘನಧೂಳಿ ॥೨೮॥

ಆರ ರಥವಿದು ಸೈನ್ಯ ಪಾರಾ ।
ವಾರಕಿದಕಂಘೈಸುವವ ತ್ರಿಪು ।
ರಾರಿಯೋ ಮೇಣಾ ತ್ರಿವಿಕ್ರಮನೋ ಸುರೇಶ್ವರನೋ ॥
ಧೀರನಾವನೊ ಪೂತು ರಣದ ದೊ ।
ಠಾರನಿವನಾರೆನುತ ತಿರುಗಿತು ।
ತೋರಹತ್ತರು ತಾಗಿದರು ಸೌಬಲ ಜಯದ್ರಥರು ॥೨೯॥

ಫಡ ಜಯದ್ರಥ ಹೋಗು ಹೋಗಳ ।
ವಡಿಕೆಯಲ್ಲಿದು ಸಾರು ಸೌಬಲ ।
ಮಿಡುಕಿದಡೆ ಮರುಳಹಿರಲೇ ಸಲ್ಲೆಮ್ಮೊಳತಿ ಮಥನ ॥

---

ತಿರು—ಬಿಲ್ಲಿನ ಮಿಣಿ.

೨೮. ಸುರನದಿ—ಗಂಗೆ, ಮಕರಾಕರ—ಸಮುದ್ರ, ಕಲಶಜ—ಅಗಸ್ತ್ಯ, ವಿಧುಂತುದ—ರಾಹು, ರಥಪಥ—ರಥದ ಮಾರ್ಗ, ರಥವು ಭೂಮಿಯ ಮೇಲೆ ನಡೆಯಲು ಪ್ರಾರಂಭವಾದುದು. ಲೋಕವು ರಜೋಗುಣದ ಉರುಳಿಯಾದುದು, ರಜೋಗುಣ—ಧೂಳಿಯ ಗುಣ, ಉರುಳಿ—ವ್ಯಾಪ್ತಿ, ಘನಧೂಳಿ, ಗಾಢಿಸಿತು—ದಟ್ಟವಾಯಿತು. ರಥವು ಹೊರಡಲು ನೆಲದಿಂದೆದ್ದ ಧೂಳಿಯು ಜಗತ್ತನ್ನೆಲ್ಲ ವ್ಯಾಪಿಸಿತು.

೨೯. ಅಂಘೈಸುವವ—ಪ್ರತಿಭಟಿಸುವವ, ತ್ರಿವಿಕ್ರಮ—ವಿಷ್ಣು, ದೊಠಾರ—ಧೃಷ್ಟ—ಧೈರ್ಯವಾಗಿ ಎದುರಿಸುವವನು, ತೋರಹತ್ತರು—ದಪ್ಪವಾದ ಕೈಯುಳ್ಳವರು—ಬಲಶಾಲಿಗಳು, ತಿರುಗಿತು—ತಿರುಗಿದರು, ತಾಗಿದರು—ತೊಡಗಿದರು, ಸೌಬಲ—ಶಕುನಿ, ಜಯದ್ರಥ—ಸೈಂಧವ.

೩೦. (ಅಭಿಮನ್ಯು ಹೇಳುತ್ತಾನೆ) ಫಡ—(ಅನುಕರಣಶಬ್ದ), ಅಳವಡಿಕೆಯಲ್ಲ—ಸಾಮಾನ್ಯವಲ್ಲ, ಮಿಡುಕಿದಡೆ ಅಲ್ಲಾಡಿದರೆ, ಮರುಳಹಿರಲೇ—ಹುಚ್ಚರಾಗುವಿರಿ, ಅತಿ ಮಥನ

ತುಡುಕಿದಡೆ ಕೈ ಬೇವುವೀ ಬಲು |
ಗಡಿಯತನ ಬಯಲಹುದೆನುತ ತಡೆ |
ಗಡಿದು ಬಿಸುಟನು ಭಟರ ಕೆಕ್ಕೆಯ ಧನುವ ಸಾರಥಿಯ ||೮೦||

ರಥ ಮುರಿಯೆ ಮನನೊಂದು ಸುಮಹಾ |
ರಥರು ಹಿಮ್ಮೆಟ್ಟಿದರು ಬಳಿಕತಿ |
ರಥ ಭಯಂಕರನೊಡೆದು ಪೊಕ್ಕನು ವೈರಿಮೋಹರವ ||
ಮಥನದಲಿ ಮುರಿದೊದೆವ ಶೈಲ |
ವ್ಯಥಿತ ಸಾಗರದಂತೆ ಬಿರಿದುವು |
ರಥ ನಿಕರ ಕಾಲಾಳು ಕುದುರೆಗಳೊಂದು ನಿಮಿಷದಲಿ ||೮೧||

ರಾಯ ಕುವರ ವಿಭಾಡ ಬಂದನು |
ರಾಯ ಕಟಕಾರಣ್ಯ ದಾವನು |
ರಾಯ ಸೇನಾಂಭೋಧಿ ವಡಬ ಜ್ವಾಲನಿದೆ ಬಂದ ||
ರಾಯರಣುಗರ ತುಳಿವ ಕೌರವ |
ರಾಯ ಜೀವ ಘರಟ್ಟ ಬಂದನು |
ಸಾಯದಿರಿ ಸಾರೆಂದು ಸಾರಿದುವಹಿತ ಕಹಳೆಗಳು ||೮೨||

ಹಾಳಿ ಹಸುಗೆಯನರಿಯದಧಟನು |
ಹೇಳುವಡೆ ಹದಿನಾಲ್ಕು ವರುಷದ |
ಬಾಲನೈದಿದನಸಮ ಚಕ್ರವ್ಯೂಹ ಮೋಹರವ ||
ಜಾಳಿಸಿತು ರಿಪುಕಟಕ ಸನ್ನುತ |
ಭಾಳಲೋಚನನೆನಿಸುವರ್ಜುನ |
ಬಾಳುಗೆನುತುದ್ದಂಡ ಕೋದಂಡವನು ಜೇವಡೆದ ||೮೩||

---

ಹೋರಾಟ, ಸಲ್ಲ—ತಕ್ಕುದಲ್ಲ, ತುಡುಕಿದಡೆ—(ಯುದ್ಧಕ್ಕೆ) ತೊಡಗಿದಡೆ, ಬೇವುವು—ಸುಡುವುವು ಬಲುಗಡಿಯತನ—ಪರಾಕ್ರಮ, ಕೆಕ್ಕೆ—ಧ್ವಜ.

೮೧. ಅತಿರಥ ಭಯಂಕರ—ಅತಿರಥರಿಗೆ ಭಯಂಕರನಾದ ಅಭಿಮನ್ಯು, ಮಥನ—ಕಡೆಯುವಿಕೆ, ಮುರಿದೊದೆವ—ಸುತ್ತಿ ಒದೆಯುವಂತೆ ಕಡೆವ, ಶೈಲವ್ಯಥಿತ—(ಮಂದರ) ಪರ್ವತದಿಂದ ಬಾಧೆಪಟ್ಟ.

೮೨. ರಾಯಕುವರ ವಿಭಾಡ—(ಶತ್ರು)ರಾಜಪುತ್ರರಿಗೆ ಭಯಂಕರನಾದವನು, ದಾವನು—ಕಾಡುಕಿಚ್ಚಿನಂತಿರುವವನು, ಜೀವ ಘರಟ್ಟ—ಜೀವಕ್ಕೆ ಬೀಸುವ ಕಲ್ಲಿನಂತಿರುವವನು, ಸಾರೆಂದು—ಸಾರಿ ಎಂದು.

೮೩. ಹಾಳಿ ಹಸುಗೆಯನರಿಯದಧಟನು—(ಸೈನ್ಯದ) ಕ್ರಮ ವಿಭಾಗ ಮೊದಲಾದುವನ್ನು ಎಣಿಸದ ಶೂರನು, ಜಾಳಿಸಿತು—ನಡುಗಿ ಹೋಯಿತು.

ಒಡೆದುದವನಿಯಜಾಂಡ ಮಂಡಲ |
ಗಡಗಡನೆ ನಡುಗಿತ್ತು ಬಿಲು ಜೇ |
ವಡೆಯೆ ದನಿ ಹಬ್ಬಿದುದು ಮಾರ್ಬಲದವರು ಕಿವಿಗೆಡಲು ||
ಅಡಸಿ ಕಣೆಗಳ ಕವಿಸಿದನು ಮುಂ |
ಗುಡಿಯ ಮುರಿವಿನೊಳರಿ ಸಮೂಹವ |
ಕಡಿದು ಹರಹಿದು ಕಲಕಿ ಹೊಕ್ಕನು ಮೊದಲ ವಳೆಯುವನು ||೮೪||

ಬಾಗಿಲಲಿ ಸೈಂಧವನ ಸೇನಾ |
ಸಾಗರವ ಮುಕ್ಕುಳಿಸಿ ತಾ ಕೈ |
ಲಾಗುಮಿಗೆ ಸರಳೆರಡರಿಂದೆಚ್ಚನು ಜಯದ್ರಥನ ||
ತೂಗಿ ತೆಗೆತೆಗೆದೆಚ್ಚು ಗರುಡಿಯ |
ಲಾಗುಕಾರನ ರಥವ ಮುರಿದನು |
ಮೇಗಣಮರರು ಪಾಯ್ಕನಲು ಕಲಕಿದನು ಪರಬಲವ ||೮೫||

---

೮೪. ಅಜಾಂಡ—ಬ್ರಹ್ಮಾಂಡ, ಅಡಸಿ—ತುರುಕಿ, ಮುಂಗುಡಿ—ಸೈನ್ಯದ ಮುಂಭಾಗ, ಮುರಿವು—ತಿರುಗಿಸಿರುವಿಕೆ, ವಳಯ—ಸುತ್ತು.

೮೫. ಮುಕ್ಕುಳಿಸಿ—(ಬಾಯಿಗೆ ಹಾಕಿಕೊಂಡು) ಉಗುಳಿ, ಕೈಲಾಗು—ಕೈಚಳಕ, ಎಚ್ಚನು—ಬಾಣಪ್ರಯೋಗ ಮಾಡಿದನು, ಗರುಡಿಯ ಲಾಗುಕಾರ—ಗರುಡಿಯಲ್ಲಿ ವ್ಯೆ ಚಳಕ ಪಡೆದವನು—ದ್ರೋಣ.

# ಆರನೆಯ ಸಂಧಿ

**ಸೂ || ವೀರರಿಪು ಕಮಲಾಕರಕೆ ಮದ |**
**ವಾರಣನು ಫಲುಗುಣನ ತನಯನು |**
**ದಾರ ಚಕ್ರವ್ಯೂಹದಲಿ ಗೆಲಿದನು ಕುಮಾರಕರ ||**

ಅವಧರಿಸು ಧೃತರಾಷ್ಟ್ರನೃಪ ಸೈಂ |
ಧವನ ಗೆಲಿದಾ ವ್ಯೂಹ ಭೇದಾ |
ಹವ ವಿಜಯ ವಿಜಯಾತ್ಮಜನ ಕೌತುಕ ರಣೋದಯವ ||
ತಿವಿದು ತರುಬುವ ರಥ ಪದಾತಿಯ |
ಕವಿವ ಗರುವ ತುರಂಗಗಳ ಬಲು |
ಜವದ ಗಜ ರಥ ಕೂಟ ಕೋಟಿಯ ಹೊದರ ಹೊಸೆ ಮೆಳೆಯ ||೧||

ಹರಿವ ಚಕ್ರ ವರೂಥ ಚಕ್ರದೊ |
ಳುರವಣಿಪ ತೇಜಿಗಳ ಕಡುಹಿನ |
ಖುರದ ಹೊಯ್ಲಿನ ಲಳಿಯ ಪವನನ ಗರಿಯ ಗಾಳಿಯಲಿ ||
ಹರನ ನಯನಜ್ವಾಲೆ ಪಾರ್ಥಿಯ |
ಸರಳ ಕಿಡಿ ಪಲ್ಲಟಿಸಿತೆನೆ ಸಂ |
ಗರದೊಳಗೆ ಸೈವರಿದು ಸದೆದನು ಸಕಲ ಸೈನಿಕರ ||೨||

---

ಸೂ||ಉದಾರ–ದೊಡ್ಡದಾದ.

೧. ಅವಧರಿಸು–ಕೇಳು, ವ್ಯೂಹ ಭೇದಾಹವ ವಿಜಯ – ಚಕ್ರವ್ಯೂಹವನ್ನು ಒಡೆದು ಯುದ್ಧದಲ್ಲಿ ಜಯಶೀಲನಾದ, ವಿಜಯ–ಅರ್ಜುನ, ಕವಿ–ಮೇಲೆ ಬೀಳು, ಗರುವ – ದೊಡ್ಡ, ಹೊದರು–ಗುಂಪು, ಹೊಸೆ ಮೆಳೆ–ಹೆಣೆದುಕೊಂಡಿರುವ ಪೊದರು,

೨. ಹರಿವ–ಹರಿಯುತ್ತಿರುವ, ಚಕ್ರ–ಚಕ್ರಗಳುಳ್ಳ, ವರೂಥ ಚಕ್ರ–ರಥ ಸಮೂಹ, ಉರವಣಿಪ–ನುಗ್ಗುತ್ತಿರುವ, ಕಡುಹಿನ–ವೇಗವುಳ್ಳ, ಖುರ–ಗೊರಸು, ಲಳಿಯ ಪವನನ–ಉಲ್ಲಾಸದಿಂದ ಹುಟ್ಟಿದ ಗಾಳಿಯಿಂದಲೂ, ಗರಿಯ ಗಾಳಿಯಲಿ–ಬಾಣದ ಗರಿಯ ಗಾಳಿಯಿಂದಲೂ, ಪಾರ್ಥಿ–ಅಭಿಮನ್ಯು, ಪಲ್ಲಟಿಸಿತು–ಭ್ರಾಂತಿಗೊಳಿಸಿತು, ಅಭಿಮನ್ಯುವಿನ ಬಾಣದ ಕಿಡಿಯು ಹರನ ನಯನಜ್ವಾಲೆಯಾಗಿ ಪರಿಣಮಿಸಿತು, ಸೈವರಿದು–ನುಗ್ಗಿ.

ಮಿಕ್ಕು ನೂಕಿದ ಕುದುರೆಕಾರರ ।
ತೆಕ್ಕೆ ಕೆಡೆದುದು ಸಂದಣಿಸಿ ಕೈ ।
ಯಿಕ್ಕಿದಾನೆಯನೇನನೆಂಬೆನು ಕಾಣೆನಳವಿಯಲಿ ॥
ಹೊಕ್ಕು ಹೊಗಿಸುವ ರಥ ತುರಗ ಸಾ ।
ಲಕ್ಕಜವ ನಿಲಿಸಿದನು ವೀರನ ।
ಮಕ್ಕಳಾಟಿಕೆ ಮಾರಿಯಾದುದು ವೈರಿರಾಯರಿಗೆ ॥೩॥

ಕದಳಿಯೊಳು ಮದದಾನೆ ಹೊಕ್ಕಂ ।
ದದಲಿ ಹೆಚ್ಚಿದ ಚಾತುರಂಗದ ।
ಮೆದೆಯನೊಟ್ಟಿದು ಹೂಣಿಹೊಕ್ಕನು ಥಟ್ಟನೊಡಹಾಯ್ದು ॥
ಇದಿರಲೆಚ್ಚನು ಸಮ್ಮುಖದಲಿಹ ।
ಕದನ ಕಲಿಗಳ ಸೀಳಿದನು ನೋ ।
ಡಿದಡೆ ಕಾಲನ ಲೀಲೆಯಾಯಿತು ವಿಷಮ ರಣರಂಗ ॥೪॥

ಜೋಡೊಡೆದು ಥಟ್ಟುಗಿದು ಬೆನ್ನೊಳು ।
ಮೂಡಲಧಟರ ಸೀಳಿದನು ಖುರ ।
ಜೋಡು ಹುಡಿಹುಡಿಯಾಗೆ ತೇಜಿಯ ಥಟ್ಟ ಖಂಡಿಸಿದ ॥
ನೋಡಲಮ್ಮುವರಿಲ್ಲ ಮಿಗೆ ಕೈ ।
ಮಾಡಲಮ್ಮುವರಿಲ್ಲ ಬಲವ ।
ಲ್ಲಾಡಿತೊಬ್ಬನೆ ಹಸುಳೆ ಹೊಕ್ಕನು ವೈರಿ ಮೋಹರವ ॥೫॥

ಆವ ವಹಿಲದೊಳಂಬ ತೊಡಚುವ ।
ನಾವ ವೇಗದೊಳಿದಿರನೆಸುವನ ।
ದಾವ ನಿರುತದಲೊಡ್ಡುವನೊ ಕೊರಳಿಂಗೆ ಕೋಲುಗಳ ॥

---

೩. ಮಿಕ್ಕು—ಹೆಚ್ಚಾಗಿ, ತೆಕ್ಕೆ—ಗುಂಪು, ಅಳವಿಯಲಿ—ಬಲದಿಂದ, ಕೈಯಿಕ್ಕಿದ—ತೊಡಗಿದ, ಆನೆಯನು ಕಾಣೆನು, ಸಾಲ—ಸಾಲಿನ, ಅಕ್ಕಜ—ಆಶ್ಚರ್ಯ, ವೀರನ—ಅಭಿಮನ್ಯುವಿನ.

೪. ಮೆದೆ—ಗುಂಪು, ಒಟ್ಟಿದು—ರಾಶಿಮಾಡಿ, ವಿಷಮ—ಕಠಿನವಾದ.

೫. ಜೋಡೊಡೆದು—ಜತೆ ಚೆದರಿ, ಥಟ್ಟುಗಿದು—ಗುಂಪನ್ನು ಬಿಟ್ಟು, ಬೆನ್ನೊಳು—(ತನ್ನ) ಹಿಂಭಾಗದಲ್ಲಿ, ಮೂಡಲು—ಕಾಣಿಸಿಕೊಳ್ಳಲು. ಖುರಜೋಡು — ಕುದುರೆಯ ಕಾಲಿನ ರಕ್ಷೆ, ಥಟ್ಟ—ಗುಂಪನ್ನು, ಅಮ್ಮುವರು—ಶಕ್ತರು.

೬. ತೊಡಚುವನು—ತೊಡುವನು, ಇದಿರಂ—ಎದುರಿಗಿರುವವನನ್ನು, ಅದು ಆವ, ನಿರುತ

ಆವ ದೃಢತೆಯ ದೃಷ್ಟಿಪಾತವಿ ।
ದಾವ ಗರುಡಿಯ ಶ್ರಮವೆನುತ ದಿವಿ ।
ಜಾವಳಿಗಳುಲಿಯಲು ವಿಭಾಡಿಸಿದನು ರಿಪುವ್ರಜವ ॥೬॥

ಅಕಟ ಶಿಶುವೋ ನಿಲ್ಲಿ ನೀವ್ನಾ ।
ಯಕರು ತೆಗೆಯಲಿ ಧರ್ಮಗಾಳೆಗ ।
ಸುಕರ ಸುಕುಮಾರಕರ ಬಿಡುಬಿಡು ಲಕ್ಷ್ಮಣಾದಿಗಳ ॥
ಸಕಲ ಕುವರರ ಕವಿಸೆನಲು ಮಾ ।
ಣಿಕದ ಮಕುಟದ ತಲೆಯ ಗರುವರು ।
ವಿಕಳರೆಯ್ದಿದರಿತ್ತಲನುವಾಗೆನುತ ಮೂದಲಿಸಿ ॥೭॥

ಮಣಿವ ಮೋಹರ ಸಮ್ಮುಖಕೆ ಸಂ ।
ದಣಿಸಿ ಬಿಟ್ಟುದು ರಾಯಕುವರರ ।
ಹಣಿದವನು ತಾ ಹೊಯ್ದನರೆಯಟ್ಟಿದ ಮಹಾರಥರ ॥
ಸೆಣಸು ಸವಿಯಾಯ್ತೆನುತ ಹಗೆಯರು ।
ಕೆಣಕಲಮ್ಮರಿಲ್ಲ ಬಿರುದರ ।
ಹೆಣನ ರಿಂಗಣಗುಣಿಸಿದನು ರಿಪುಬಲ ಭಯಂಕರನು ॥೮॥

ಎಡದಲೌಕುವ ರಾವುತರ ವಂ ।
ಗಡವನೆಚ್ಚನು ಸಮ್ಮುಖದಲವ ।
ಗಡಿಸಿದಿಭಕೋಟಿಗಳ ಕೊಂದನು ಸರಳ ಸಾರದಲಿ ॥
ಕಡುಗಿ ಬಲದಲಿ ಹರಿವ ರಥಿಕರ ।
ಕೆಡಹಿದನು ಕಾಲಾಳು ತೇರಿನ ।
ಗಡಣ ಹುಡಿಹುಡಿಯೆನಲು ಸಂಹರಿಸಿದನು ಪರಬಲವ ॥೯॥

---

ದಲಿ–(ನಿರ್ಣಯದಲ್ಲಿ)–ಗುರಿಯಿಟ್ಟು, ಕೋಲು–ಬಾಣ, ದೃಷ್ಟಿಪಾತವು–(ಕಣ್ಣಿನ) ಗುರಿ,

೭. ನೀವು ನಾಯಕರು ನಿಲ್ಲಿ, ಧರ್ಮಗಾಳೆಗ, ತೆಗೆಯಲಿ–ಪ್ರಾರಂಭಿಸಲಿ, ಸುಕರ–ಸುಲಭರಾದ, ಲಕ್ಷ್ಮಣಾದಿಗಳ–ಲಕ್ಷ್ಮಣನೇ ಮೊದಲಾದವರ, ವಿಕಳರು–ಮನಸ್ಸು ಕಲಕಿದವರು.

೮. ಮಣಿವ–(ಬಾಗುವ)–ಸೋಜಿ ಬೀಳುವ, ಮೋಹರ–ಸೈನ್ಯ, ಹಣಿದು–ಹೊಡೆದು, ಅರೆಯಟ್ಟಿದ–ಹಿಂದಿನಿಂದ ಅಟ್ಟಿಕೊಂಡು ಬಂದ, ಸೆಣಸು–ಯುದ್ಧ, ರಿಂಗಣ ಗುಣಿಸಿದನು–ಹಿಂದಕ್ಕೂ ಮುಂದಕ್ಕೂ ತೂಗುವಂತೆ ಕುಣಿಸಿದನು, ರಿಂಖಣ (ಸಂ.)

೯. ಔಕುವ–ಒತ್ತಿಬರುವ, ವಂಗಡ–ಸಮೂಹ, ಸಾರ–ಬಲ, ಕಡುಗಿ–ಉತ್ಸಾಹಪಟ್ಟು,

ಕೊಡೆ ನೆಗೆದುವಟ್ಟೆಗಳು ರಕುತದ |
ಕಡಲೊಳರೆಜೀವದ ಭಟರು ಬಾ |
ಯ್ವಿಡುತ ತೇಕಾಡಿದುದು ರುಂಡದ ಹಿಂಡು ಮುಳುಗಾಡೆ ||
ಅಡಸಿ ನೆಗೆವಾನೆಗಳ ತಲೆಗಳ |
ಗಡಣ ಮೆರೆದುವು ಮಿಗುವ ತೇಜಿಯು |
ಕಡುಕುಗಳು ಕುಣಿದಾಡಿದುವು ಕಿಗ್ಗಡಲ ರಕುತದಲಿ ||೧೦||

ಉರವಣಿಸಿದನು ಮತ್ತೆ ಭಟನ |
ಬ್ಬರಿಸಿ ಖತಿಯಲಿ ನಿಖಿಳ ಮನ್ನಂ |
ತರದ ಕಡೆಯಲಿ ನೆಲನನದ್ದುವ ಕಡಲ ಕಡುಹಿನಲಿ ||
ಸರಳು ಕವಿದುವು ಶಕುತಿ ಭಲ್ಲೆಯು |
ಪರಶು ಸುಳಿದುವು ಕುಂತ ಮುದ್ಗರ |
ಸುರಗಿ ಹೊಳೆದುವು ಕೈದು ಹೇರಿದುವಖಿಳ ದಿಗುತಟವ ||೧೧||

ಮೂದಲಿಸೆ ಮುಂಚಿದುವು ಸುಂಟಗೆ |
ಗೋದು ಹರಿದುವು ಕರಿಗಳೇರಿನ |
ಬಾದನದಿ ಸುರಿಸಿದುವು ರಕುತವ ಮೆಯ್ಯನೊಡೆ ಸೀಳಿ ||
ತೋದು ನೆತ್ತರ ನೊರೆಯ ಸುಳಿಯೊಳು |
ನಾದು ನಲಿದಾಡಿದುವು ಕಳನೊಳು |
ಬೀದಿವರಿದುವು ಬಿಲ್ಲು ಬಿಲ್ಲಿಗೆ ಬೋಳೆಯಂಬುಗಳು ||೧೨||

---

೧೦. ಕೊಡೆನೆಗೆದುವು—ಮೇಲಕ್ಕೆ ಹಾರಿದುವು, ಅಟ್ಟೆ—ಮುಂಡ, ಅರೆ ಜೀವದ—ಕುಟುಕ ಜೀವವುಳ್ಳ, ತೇಕಾಡಿದುದು—ತೇಲಾಡಿದರು, ಅಡಸಿ—ನುಗ್ಗಿ, ಮಿಗುವ—ಹೆಚ್ಚಾದ, ಕಡುಕು—ಮುಂಡ, ಕಿಗ್ಗಡಲು—ಕಿರಿದು+ಕಡಲು.

೧೧. ಅದ್ದುವ—ಮುಳುಗಿಸುವ, ಕಡುಹು – ಆಧಿಕ್ಯ, ಶಕುತಿ – ಶಕ್ತ್ಯಾಯುಧ, ಹೇರಿದುವು—ತುಂಬಿದುವು.

೧೨. ಮೂದಲಿಸೆ—ಹಿಯ್ಯಾಳಿಸಲು, ಬಿಲ್ಲು ಬಿಲ್ಲಿಗೆ, ಬೋಳೆಯಂಬುಗಳು—ಪ್ರತಿ ಬಿಲ್ಲಿನಿಂದಲೂ ಹೊರಟ ಮೊನೆಯಾದ ಬಾಣಗಳು, ಮುಂಚಿದುವು—ಮುಂದುವರಿದುವು, ಸುಂಟಗೆ ಗೋದು – ಹೃದಯ ಮಾಂಸವನ್ನು ಚುಚ್ಚಿಕೊಂಡು ಹೊರಟು, ಏರಿನ—ಗಾಯದ, ಬಾದನ—ವಾತಾಯನ (ಸಂ.)—ಕಂಡಿ, ಮೆಯ್ಯನು—(ಕರಿಗಳ)ಮೈಯನ್ನು, ನಾದು—ನನೆದು.

ತೊಲಗಿರೈ ಕಾಲಾಳು ಮೇಲಾ ।
ಳಳವಿಗುಡಲಿ ಮಹಾರಥರು ಕೈ ।
ಕೊಳಲಿ ಜೋದರು ದಿಟ್ಟರಾದಡೆ ಕವಿಸಿ ಕರಿಘಟೆಯ ॥
ಕೆಲದ ದೊರೆಗಳು ಬರಲಿ ಮಾರಿದ ।
ತಲೆಯ ಭಂಡರು ಹೊತ್ತಿರದೆ ಕೈ ।
ಕೊಳಲಿ ಕರ್ಣಾದಿಗಳೆನುತ ತೆಗೆದೆಚ್ಚನಭಿಮನ್ಯು ॥೧೩॥

ಕಾರಗವಿಸಿದನಮಮ ರಾಯ ಕು ।
ಮಾರ ಕಂಠೀರವನು ರಿಪು ಪರಿ ।
ವಾರವನು ನಡೆಗೊಳಿಸಿದನು ಯಮರಾಜನಾಲಯಕೆ ॥
ಮಾರಿಮೊಗವಡೆದೆಸೆದಳೋ ಕೈ ।
ವಾರವನು ತರುವಲಿಗಿದೆತ್ತಣ ।
ವೀರವೋ ಶಿವಶಿವ ಎನುತ ಬೆರಗಾದುದಮರ ಗಣ ॥೧೪॥

ಕಲಿಗಳೆಯ್ದಿದರೊಡನೆ ತೊಡೆ ಸಂ ।
ಕಲೆಯ ತೊಲಗದ ಕಂಬದುಗ್ಗಡ ।
ಲಳಿಯ ಗಜದಲ್ಲಣದ ಶರಭನ ವೃಷಭ ಮೊದಲಾದ ॥
ಹುಲಿಯ ಕೀರಿತಿ ಮುಖದ ವ್ಯಾಘ್ರನ ।
ಬಿಳಿಯ ಚೌರಿಯ ಬಿರುದುಗಳ ಮುಂ ।
ದಲೆಯ ಸುಭಟರು ಬಂದು ತಾಗಿತು ಪಾರ್ಥನಂದನನ ॥೧೫॥

---

೧೩. ಅಳವಿಗುಡಲಿ – ಯುದ್ಧಮಾಡಲಿ, ಕೈಕೊಳಲಿ – (ಯುದ್ಧವನ್ನು) ಮಾಡಲಿ, ಜೋದ–ಆನೆಯ ಸವಾರರು, ಕರಿಘಟೆಯ, ಕವಿಸಿ – ಕವಿಸಿರಿ, ತಲೆಯ ಮಾರಿದ ಭಂಡರಾದ ಕರ್ಣಾದಿಗಳು. ಹೊತ್ತಿರದೆ–ತಡಮಾಡದೆ.

೧೪. ಕಾರಗವಿಸಿದನು– (ಬಾಣಗಳಿಂದ) ಕತ್ತಲೆ ಕವಿಸಿದನು, ಮೊಗವಡೆದು– (ಅಭಿಮನ್ಯುವಿನ) ಮೈಯನ್ನು ಪಡೆದು. ಕೈವಾರ–ಆಯುಧವಿಶೇಷ (?), ತರುವಲಿ–ಹುಡುಗ.

೧೫. ತೊಡೆ....... ಗಜದಲ್ಲಣದ – ಪಳಗದ ಆನೆಯನ್ನು ಕೂಡ ತಲ್ಲಣಿಸುವಂತೆ ಮಾಡುವ, ಉಗ್ಗಡ ಲಳಿಯ–ಹೆಚ್ಚಾಗಿ ಮದಿಸಿದ, ಶರಭನ.......ಹುಲಿಯ–ಶರಭ ಮೊದಲಾದ ಬಿರುದುಗಳುಳ್ಳ, ಕೀರಿತಿ–ಕೀರ್ತಿ, ಕೀರಿತಿಮುಖ–ಒಂದು ಬಿರುದು, ಮುಂದಲೆಯ ಸುಭಟರು–ಮುಂದಾಳುಗಳು.

ದೊರೆಯ ಸುಕುಮಾರಕನು ಹಲಬರ ।
ಶಿರವನರಿದನು ಪಾಯ ದಳವನು ।
ಸರಳ ಮೊನೆಯಲಿ ಸವರಿದನು ಮುಂಕೊಂಡ ಹೂಣಿಗರ ॥
ಒರಸಿದನು ಮಾಸಾಳ ಮೊತ್ತದ ।
ಕೊರಳನರಿದನು ರಣದ ಭಾಷೆಯ ।
ಬಿರುದರನು ಮುಂಕೊಂಡು ಕೊಂದನು ರಣದೊಳಭಿಮನ್ಯು ॥೧೬॥

ಕರಿಘಟೆಯ ಕೆದರಿದನು ಹಯ ಮೋ ।
ಹರವ ಜರುಹಿದ ರಣಕೆ ಹರಿತಹ ।
ವರ ರಥವ ಹುಡಿಗುಟ್ಟಿದನು ಕೆಡಹಿದನು ಕಾಲಾಳ ॥
ಹುರಿಯೊಡೆದು ಮೆಯ್ದೆಗೆದು ಸಲೆ ಕೈ ।
ಮರೆದು ಕೈದುವನಿಳುಹಿ ಪಡೆ ಮುಖ ।
ದಿರುಹಲೆಚ್ಚಸು ಕೊಚ್ಚಿದನು ಕೌರವ ಚತುರ್ಬಲವ ॥೧೭॥

ತಳಿತ ಹೊಗರಿನ ಬಾಯ ಧಾರೆಯ ।
ಹೊಳಹುಗಳ ಹೊಸಮಸೆಯ ತಳಪದ ।
ಬೆಳಗುಗಳ ಬಿಟ್ಟೇರ ಧಾರೆಯ ಬಳ್ಳಿಮಿಂಚುಗಳ ॥
ಉಳಿಯ ಹಂಗನ ಗರಿಯ ಬಿಗುಹಿನ ।
ಹಿಳುಕುಗಳ ಹೊಗರಂಬು ತಿವಿದುವು ।
ತುಳುಕಿದುವು ತೂರಿದುವು ಕೆದರಿದುವಹಿತ ಬಲದಸುವ ॥೧೮॥

ಅಳವಿಗೆಡೆ ಧುಮ್ಮಿಕ್ಕಿ ರಥದವ ।
ರಿಳೆಗೆ ಬಿದ್ದರು ಭಯದಿ ತೇಜಿಯ ।
ನಿಳಿದು ರಾವ್ತರು ಕರವ ಮುಗಿದರು ಕೊರಳ ಸಲಹೆನುತ ॥
ಗುಳವ ಸಡಿಲಿಸಿ ಹಾಯ್ದು ಜೋದಾ ।
ವಳಿಗಳಿಳಿದುದು ಕೈಯ ಕೈದುವ ।
ನಿಳುಹಿ ಬಾಯಲಿ ಬೆರಳನಿಟ್ಟರು ಸಿಖಿಲ ಪರಿವಾರ ॥೧೯॥

---

೧೬. ಪಾಯದಳ—ಕಾಲಾಳಿನ ಸೈನ್ಯ, ಮಾಸಾಳ—ಶಿಕ್ಷಿತರಾದ ಭಟರ.

೧೭. ಜರುಹಿದ – ಕೆಡವಿದನು, ಹುರಿಯೊಡೆದು – ಕಟ್ಟೊಡೆದು, ಕೊಚ್ಚಿದನು—ಕತ್ತರಿಸಿದನು.

೧೮. ತಳಿತ ಹೊಗರಿನ—ಹೊರಡುತ್ತಿರುವ ಕಾಂತಿಯುಳ್ಳ, ಹೊಸಮಸೆಯ - ಹೊಸದಾಗಿ ಹಿಡಿದ ಸಾಣೆಯುಳ್ಳ, ತಳಪ—ಹೊಳಪು, ಬಿಟ್ಟೇರ—ಈಟಿಯು, ಉಳಿ—ಹೊಳಪು, ಹಂಗನ ಗರಿಯ ಬಿಗುಹಿನ—ಹದ್ದಿನ ಗರಿ ಬಿಗಿಸಿರುವ, ಹೊಗರಂಬು—ಕಾಂತಿಯುಳ್ಳ ಬಾಣ.

೧೯. ಗುಳ—ಆನೆ ಕುದುರೆಗಳ ಮೇಲೆ ಹಾಕುವ ಜೂಲು (ಪಕ್ಕರಕ್ಕೆ).

ಎಸಳೆಸಳ ಮೋಹರದ ಸಂದಣಿ |
ಯುಸಿರಸುಳಿದುದು ಕೇಸರಾಕೃತಿ |
ಯಸವು ಸುಭಟರು ಪಥಿಕರಾದರು ಗಗನ ಮಾರ್ಗದಲಿ ||
ನುಸುಳಿದರು ಕರ್ಣಿಕೆಯ ಕಾಹಿನ |
ವಸುಮತೀಶರು ರಾಯನರನೆಲೆ |
ದೆಸೆಗೆಡಲು ಮೊಳಗಿದನು ಪಾರ್ಥಕುಮಾರನಳವಿಯಲಿ ||೨೦||

ಜರಿದುದಬುಜ ವ್ಯೂಹ ನೂಕಿದ |
ಕರಿ ತುರಗ ಕಾಲಾಳು ರಥಿಕರ |
ಮರಳುದಲೆ ತಾನಿಲ್ಲ ನೆರೆ ನುಗ್ಗಾಯ್ತು ಕುರು ಸೇನೆ ||
ದೊರೆಗಳಹ ದ್ರೋಣಾದಿಗಳು ಕೈ |
ಮರೆದು ಕಳೆದರು ಪಾರ್ಥತನಯನ |
ಸರಿದೊರೆಗೆ ಪಡಿಯಾವನೆಂದನು ಕೌರವರ ರಾಯ ||೨೧||

ತಂದೆ ಹಡೆಯನೆ ಮಗನನಹುದೋ |
ಕಂದ ಕಲ್ಪಸಹಸ್ರ ನೋಂತಿಹ |
ಳಿಂದುಧರನನು ನಿಮ್ಮ ತಾಯಿ ಸುಭದ್ರೆಯಲ್ಲದೊಡೆ ||
ಇಂದಿನೀ ಬಲು ವಿಷಮ ರಣ ಜಯ |
ದಂದವೀ ಸೌರಂಭವೀ ಸರ |
ಳಂದವೀ ತೆರಳಿಕೆಯದಾವಂಗೆಂದನವನೀಶ ||೨೨||

---

೨೦. ಸಂದಣಿ ಉಸಿರನುಳಿದುದು, ಕಾಹಿನ—ಕಾವಲಿದ್ದ, ರಾಯನ—ಕೌರವನ, ಅರನೆಲೆ—ಅರಮನೆ (ಯಲ್ಲಿದ್ದವರು), ಮೊಳಗಿದನು—ಸಿಂಹನಾದ ಮಾಡಿದನು.

೨೧. ಜರಿದುದು—ಕೃಶವಾಯಿತು, ನೂಕಿದ—ಮೇಲ್ಬಿದ್ದು ಬಂದ, ಮರಳುದಲೆ—ಹಿಂದಿರುಗುವಿಕೆ, ದೊರೆಗಳಹ—ಸಮಾನರಾದ, ಕೈಮರೆದು ಕಳೆದರು—ಬಿಟ್ಟುಹೋದರು.

೨೨. ತಂದೆ........ಮಗನನು—(ಭಾವಾರ್ಥ) ಲೋಕದಲ್ಲಿ ಎಷ್ಟೋ ಮಂದಿ ಪುತ್ರರಿರುವುದಿಲ್ಲವೇ ? ಅಹುದೋ ಕಂದ—ಶಹಬಾಸ್ ! ನೀನೀಗ ಮಗ, ಇಂದುಧರನನು ನೋಂತಿಹಳು—ಈಶ್ವರಾರಾಧನೆ ಮಾಡಿರುವಳು. ವಿಷಮ ರಣ ಜಯದ ಅಂದವು, ಈ ಸರಳ ಅಂದವು, ತೆರಳಿಕೆ—ಚಟುವಟಿಕೆ.

ಹುರುಳ ಮರೆದೆನು ಮಗನೆ ಸಾಲದೆ |
ಭರತ ಕುಲದಲಿ ನಿನ್ನ ಬೆಳವಿಗೆ |
ಯೆರಡು ಕವಲನ್ವಯಕೆ ಕೊಡದೇ ಸುಗತಿ ಸಂಪದವ ||
ಕಿರುಳು ಬೀಳವೆ ತನ್ನ ಬಸುರಿಂ |
ದುರುಳಿದವರಿಂದೇನು ಫಲ ಮ |
ತ್ಸರವೆ ಪಾರ್ಥ ಕೃತಾರ್ಥನೆಂದನು ಕೌರವರ ರಾಯ ||೨೩||

ಎನುತ ಬಿಲುದುಡುಕಿದನು ಸೇನಾ |
ವನಧಿಗಭಯವನಿತ್ತು ಮರಳುವ |
ಜನಪರನು ಜರೆದೆಡಬಲದ ಮನ್ನೆಯರ ಮೂದಲಿಸಿ ||
ಮೊನೆಗಣೆಯ ತೂಗುತ್ತ ನರಸಂ |
ದನನ ರಥವನು ತರುಬಿ ನಿನ್ನಯ |
ತನಯನಡ್ಡೈಸಿದನು ಕೌರವರಾಯ ಖಾತಿಯಲಿ ||೨೪||

ಮಗುವು ನೀ ಕೆಡಬೇಡ ಹೋಗೆನು |
ತಗಣಿತಾಸ್ತ್ರವ ಸುರಿವುತೈತರೆ |
ನಗುತ ನಿಂದಭಿಮನ್ಯು ನುಡಿದನು ಕೌರವೇಶ್ವರಗೆ ||
ಮಗುವು ತಾನಹೆ ತನ್ನ ಬಾಣಕೆ |
ಮಗುತನವು ಬೇರಿಲ್ಲವರ ಹರ |
ಹುಗಳ ನಿಮಿಷವು ನಿಂದು ನೋಡೆಂದೆಚ್ಚನಭಿಮನ್ಯು ||೨೫||

ಎಸಲು ಕಣೆ ಮುಕ್ಕುರುಕಿದುವು ಹೊಸ |
ಮಸೆಯ ಧಾರೆಯ ತೋರ ಕಿಡಿಯಲಿ |
ಮುಸುಕಿತರಸನ ತೇರ ತಳಿತುವು ಮೆಯ್ಯೊಳಂಬುಗಳು ||

---

೨೩. ಹುರುಳ ಮರೆದೆನು—ಮತ್ಸರವನ್ನು ಬಿಟ್ಟೆನು, ಬೆಳವಿಗೆ—ಅಭಿವೃದ್ಧಿ, ಕಿರುಳು—ಮಕ್ಕಳು.

೨೪. ಮರಳುವ—ಹಿಂದಿರುಗುತ್ತಿರುವ, ಮನ್ನೆಯರು—ಗೌರವಾರ್ಹರು.

೨೫. ಮಗು ತನವು—ಬಾಲ್ಯ, ಅವರ—ಆ ಬಾಣಗಳ, ಹರಹು—ಹರಡುವಿಕೆ.

೨೬. ಮುಕ್ಕುರಿಕಿದುವು – ಮುತ್ತಿಕೊಂಡುವು, ತೋರ ಕಿಡಿ – ದಪ್ಪವಾದ ಕಿಡಿ, ಮುಸುಕಿತು—ಆವರಿಸಲ್ಪಟ್ಟಿತು. ಜರಿವ ಜಾರಿ ಬೀಳುತ್ತಿರುವ, ಜೋಡು ಕವಚ, ಆನನದೆಸಕ—ಮುಖಭಾವ.

ಬಸಿವ ರಕುತದ ಜರಿವ ಜೋಡಿನ |
ನಸಿದ ಗರ್ವದ ನೆಗ್ಗಿದಾನನ |
ದೆಸಕದೊಣಗಿದ ಬಾಯ ಭೂಪನ ಕಂಡನಾ ದ್ರೋಣ ||೨೬||

ರಾಯ ಸಿಲುಕಿದನಕಟಕಟ ರಾ |
ಧೇಯ ನಡೆ ಕೃಪ ಹೋಗು ಮಗನೆ ನಿ |
ಜಾಯುಧವ ಹಿಡಿ ಶಲ್ಯ ತಡೆಯದಿರೇಳು ಕೃತವರ್ಮ ||
ರಾಯನನುಜರು ಕೈದುಗೊಳಿ ರಣ |
ದಾಯ ತಪ್ಪಿತು ನೃಪತಿ ಮಾರಿಯ |
ಬಾಯ ತುತ್ತಾದನು ಶಿವಾ ಎಂದೊರಲಿದನು ದ್ರೋಣ ||೨೭||

ಮಾತು ಹಿಂಚಿತು ಮುಂಚಿ ಸುಭಟ |
ವ್ರಾತ ಹೊಕ್ಕುದು ಸಿಕ್ಕಿದರಸನ|
ಭೀತಿಯನು ಬಿಡಿಸಿದರು ಬೀರಿದರಂಬುಗಳ ಮಳೆಯ ||
ಸೋತೆವಾವ್ ನೀ ಗೆಲಿದೆ ಕರೆ ನಿ |
ಮ್ಮಾತಗಳನೀ ಭ್ರೂಣಹತ್ಯಾ |
ಪಾತಕಕ್ಕಂಜುವೆವೆನುತ ಕೈಕೊಂಡನಾ ದ್ರೋಣ ||೨೮||

ರಾಯನನು ತೊಲಗಿಸಿದರಾಕ |
ಣಾರ್ಯತಾಸ್ತ್ರರು ರಾಹುವಿನ ಕಟ |
ವಾಯ ಚಂದ್ರನ ಸೆಳೆವವೋಲರಿದಾಯ್ತು ಸುಭಟರಿಗೆ ||
ಸಾಯಕವ ಕೈಕೊಳಿಸಿದನು ವ |
ಜ್ರಾಯುಧನ ಮೊಮ್ಮನ ರಥವ ನಿ |
ದಾರ್ಯದಲಿ ಮುತ್ತಿದರು ಕೌರವ ಸೇನೆಯತಿಬಲರು ||೨೯||

---

೨೭. ಮಗನೆ–ಅಶ್ವತ್ಥಾಮನೆ, ಆಯ–ಕ್ರಮ.

೨೮. ಮಾತುಹಿಂಚಿ........ಹೊಕ್ಕುದು–ಅಪ್ಪಣೆ ಕೊಡುವುದಕ್ಕೆ ಮೊದಲೇ ಸುಭಟರು ಹೊಕ್ಕರು, ನಿಮ್ಮಾತಗಳ–ನಿಮ್ಮವರನ್ನು, ಭ್ರೂಣಹತ್ಯ–ಶಿಶುವಧೆ.

೨೯. ತೊಲಗಿಸಿದರು–(ಯುದ್ಧರಂಗದಿಂದ) ಸಾಗಿಸಿದರು, ಆಕಣಾರ್ಯತಾಸ್ತ್ರರು–ಕಿವಿವರೆಗೂ ಎಳೆದ ಅಸ್ತ್ರವುಳ್ಳವರು, ಸಾಯಕವ ಕೈಕೊಳಿಸಿದನು – (ಅಭಿಮನ್ಯುವಿನಿಂದ ಮತ್ತೆ) ಬಾಣವನ್ನು ಹಿಡಿಸಿದನು, ವಜ್ರಾಯುಧನ ಮೊಮ್ಮ – ಇಂದ್ರನ ಮೊಮ್ಮಗ – ಅಭಿಮನ್ಯು, ನಿದಾರ್ಯದಲಿ–ಒಗ್ಗಟ್ಟಿನಲ್ಲಿ.

ಹಸುಳೆತನದಲಿ ಹರನ ಮಗನಾ |
ವಿಷಮ ದೈತ್ಯನ ತರಿದು ಬಿಸುಡನೆ |
ಶಿಶುವಲಾ ಪ್ರದ್ಯುಮ್ನ ಮುರಿಯನೆ ಶಂಬರಾಸುರನ ||
ಶಿಶುವೆ ನೋಡಭಿಮನ್ಯು ಸುಭಟ |
ಪ್ರಸರವಿನಿಬರನೊಂದು ಗಾಯದೊ |
ಳುಸುರ ತೆಗೆಬಗೆಮಾಡಿದನು ಧೃತರಾಷ್ಟ್ರ ಕೇಳೆಂದ ||೩೦||

ಗುರು ಸುತನ ನೋಯಿಸಿದ ಶಲ್ಯನ |
ಭರವಸವ ನಿಲಿಸಿದನು ಕೃಪನು |
ಬ್ಬರದ ಗರ್ವವ ತೊಡೆದು ಕೃತವರ್ಮಕನನೊಡೆಯೆಚ್ಚು ||
ಅರಸನನುಜರ ಸದೆದು ಸೌಬಲ |
ದುರುಳ ಬಾಹ್ಲಿಕ ಸೋಮದತ್ತರ |
ಹುರುಳುಗೆಡಿಸಿದನೊಬ್ಬ ಶಿಶು ಗೆಲಿದನು ಮಹಾರಥರ ||೩೧||

ಮುಳುಗಿದಂಬಿನ ಮರುಮೊನೆಯ ಮೆ |
ಯ್ಗಳಮಹಾರಥ ರಾಜಿ ಕದನದ |
ನೆಲೆಯ ಬಿಡೆ ಖತಿಗೊಂಡು ಮುರಿದೋಡುವರ ಮೂದಲಿಸಿ ||
ಬಿಲುದುಡುಕಿ ಸಾರಥಿಗೆ ಸೂಚಿಸಿ |
ಮಲೆತೆಯೆಲಪೋ ಮಗನೆ ಫಡಫಡ |
ತೊಲಗು ತೊಲಗೆಂದೆನುತ ರಿಪುವನು ತರುಬಿದನು ಕರ್ಣ ||೩೨||

ಗಾರುಗೆಡೆದಡೆ ಮೆರೆಯದೋಲೆಯ |
ಕಾರತನ ನೀನೆಮ್ಮೊಡನೆ ಮೆ |
ಯ್ವೋರಿ ಮಡಮುರಿಯಿಲ್ಲದೆಚ್ಚಾಡಿದಡೆ ಸಫಲವದು ||

---

೩೦. ಹರನ ಮಗನು—ಕುಮಾರಸ್ವಾಮಿ, ವಿಷಮ ದೈತ್ಯ—ಕ್ರೂರನಾದ ತಾರಕಾಸುರ, ಪ್ರದ್ಯುಮ್ನ—ಮನ್ಮಥ, ಗಾಯ—ಏಟು, ಉಸುರ ತೆಗೆಬಗೆಮಾಡು — ಹೆಚ್ಚು ಸುರು ಬರುವಂತೆ ಮಾಡು—ಆಯಾಸ ಪಡಿಸು.

೩೧. ಭರವಸ—ದಾರ್ಢ್ಯ, ತೊಡೆದು — ಒರಸಿ, ಒಡೆಯೆಚ್ಚು — ಸೀಳುವಂತೆ ಬಾಣ ಹೊಡೆದು, ಹುರುಳು—ಸತ್ವ.

೩೨. ಮುಳುಗಿದ—ನಾಟಿಕೊಂಡಿರುವ, ಮರುಮೊನೆ—ಚುಚ್ಚಿ ಹೊರಗೆ ಹೊರಟಿರುವ ಬಾಣದ ತುದಿ, ಕದನದ ನೆಲೆ—ರಣರಂಗ, ಮಲೆತೆ—ಕೊಬ್ಬಿದ್ದೀಯೆ.

೩೩. ಗಾರುಗೆಡೆದಡೆ —ನಿಂದಾ ವಚನಗಳಾಡಿದರೆ, ಓಲೆಯಕಾರತನ — ದೂತಭಾವ,

ತೋರುವೆನು ಕೈಗುಣವನೆನುತ |
ಯ್ಡಾರು ಶರದಲಿ ಕರ್ಣನೆದೆಯನು |
ಡೋರುಗಳೆಯಲು ಬಳಲಿದನು ಪೂರಾಯ ಗಾಯದಲಿ ||೩೩||

ಬೆದರಿ ಭೂಕಂಪದಲಿ ಕುಲಗಿರಿ |
ಯುದಿರುವಂತಿರೆ ಚಲಿಸಿ ಕಾಯವು |
ಬಿದಿರಿ ಮರಳುವ ಕಂಗಳಲಿ ಕಲಿಕರ್ಣ ಮೆಯ್ಮರೆಯೆ ||
ಹೆದರಿತೀ ಬಲವಕಟ ಕರ್ಣನ |
ಸದೆದನೋ ಸಾಹಸಿಕ ಶಿಶು ಕಾ |
ದಿದೆವು ನಾವಿನ್ನೆನಲು ಕಡುಗಲಿ ಶಲ್ಯಸಿದಿರಾದ ||೩೪||

ಬಾಲಕನೆ ಹಿಮ್ಮೆಟ್ಟು ಹಿಮ್ಮೆ |
ಟ್ಟಾಳುತನ ನಮ್ಮೊಡನೆಯೇ ಮರು |
ಳೇಳಿಗೆಯೊಳುಬ್ಬೆದ್ದ ಕರ್ಣನ ಸದೆದ ಗರ್ವದಲಿ ||
ಮೇಲನರಿಯಾ ಶಲ್ಯನೊಡನೆಯು |
ಕಾಳೆಗವೆ ನಿಮ್ಮಯ್ಯಗಳಿಗಿಂ |
ದೂಳಿಗವ ತಹುದೆನುತ ಸುರಿದನು ಸರಳ ಸರಿವಳೆಯ ||೩೫||

ಬಾಲತನವೇನೂಣೆಯವೆ ಕ |
ಟ್ಟಾಳುತನವಾಭರಣವವನೀ |
ಪಾಲಸುತರಿಗೆ ವಿದ್ಯೆಯೇ ವಿಪ್ರರಿಗಲಂಕಾರ ||
ಆಳಿನಂಗವನೆತ್ತ ಬಲ್ಲೆ ಶ |
ರಾಳಿಯಲಿ ನಿನ್ನಂಘವಣೆಯ ಛ |
ಡಾಳತನವನು ಮುದ್ರಿಸುವೆನೆನುತೆಚ್ಚನಭಿಮನ್ಯು ||೩೬||

---

ಮಡಮುರಿಯಿಲ್ಲದೆ—ಹಿಂದಿರುಗದೆ (ಮಡ—ಹಿಮ್ಮಡಿಯನ್ನು, ಮುರಿ—ತಿರುಗಿಸುವಿಕೆ) ಡೋರುಗಳೆಯಲು—ಸೀಳಲು, ಪೂರಾಯ—ಹೆಚ್ಚಾದ.

೩೪. ಬಿದಿರಿ—ಬಿರಿದು, ಮರಳುವ—ಸುತ್ತುತ್ತಿರುವ.

೩೫. ಮರುಳೇಳಿಗೆ—ಬುದ್ಧಿವೈಕಲ್ಯ, ಉಬ್ಬೆದ್ದ—ಗರ್ವಿಸಿದ, ಮೇಲನರಿಯಾ—(ನಿನ್ನ) ಮೇಲನ್ನು ಅರಿಯಲಾರೆಯಾ? ಊಳಿಗವ ತಹುದು—ಕೆಲಸವನ್ನು ತರುವುದು, ಸರಿವಳೆ—ಜಡಿಮಳೆ.

೩೬. ಊಣೆಯ—ಕೊರತೆ, ಆಳಿನ—ಶೂರನ, ಅಂಗ—ಯೋಗ್ಯತೆ, ಅಂಘವಣೆ—ಸಾಮರ್ಥ್ಯ, ಛಡಾಳತನ—ಹೆಚ್ಚಿಗೆ, ಮುದ್ರಿಸುವೆನು—ಮುಚ್ಚುವೆನು.

ಸರಳ ಸರಳಲಿ ಕಡಿದು ಸವೆಯದೆ |
ಸರಿ ಮಿಗಿಲು ಕಾದಿದಡೆ ಶಲ್ಯನ |
ಧರಧುರದ ದೆಖ್ಖಾಳತನವನು ಕಂಡು ಖಾತಿಯಲಿ ||
ಸರಳು ಹದಿನೆಂಟರಲಿ ಶಲ್ಯನ |
ಬರಿಯ ಕೆತ್ತಿದನಯ್ದು ಬಾಣದೊ |
ಳುರವ ತೋಡಿದನೊಂದು ನಿಮಿಷಕೆ ಶಲ್ಯ ಸೈಗೆಡೆದ ||೩೭||

ತಲೆ ತಿರುಗಿ ಕಟಿಯೊಣಗಿ ಕಂಗಳ |
ಬಳೆ ಮರಳಿ ಬಸವಳಿಯೆ ಸಾರಥಿ |
ತೊಲಗಿಸಿದನಾ ಶಲ್ಯನೊಡಹುಟ್ಟಿದನ ವೇದನೆಯ ||
ನಿಲುಕಿ ಕಂಡನು ಶಲ್ಯನನುಜನು |
ಹಿಳುಕ ಹಿಳುಕಿನ ಮೇಲೆ ಸಂಧಿಸಿ |
ಮುಳಿದೆಸುತ ತಾಗಿದನು ಖತಿಯಲಿ ಪಾರ್ಥನಂದನನ ||೩೮||

ಫೂತು ಶಲ್ಯನ ತಮ್ಮನೇ ಮಾ |
ರಾತನಣ್ಣನ ಹರಿಬವನು ದಿಟ |
ಸೂತ ನೋಡೈ ಸಾಹಸಿಗತನ ಲೇಸು ಲೇಸೆನುತ ||
ಆತನಂಬಯ್ದಾರ ಮನ್ನಿಸಿ |
ಸೋತವೊಲು ಮನಕೊಲವ ಮಾಡಿ ನಿ |
ಶಾತ ಶರದಿಂದಿಳುಹಿದನು ಶಲ್ಯಾನುಜನ ಶಿರವ ||೩೯||

---

೩೭. ಸರಳ—ಬಾಣವನ್ನು, ಸವೆಯದೆ—ಜಗ್ಗದೆ, ಸರಿಮಿಗಿಲು—ಸಮನಾಗಿ, ಧರಧುರ—ಅತಿಶಯವಾದ, ದೆಖ್ಖಾಳತನ—ಹೆಚ್ಚಿಗೆ, ಬರಿಯ—ಪಕ್ಕೆಯನ್ನು, ಉರ – ಎದೆ, ಸೈಗೆಡೆದ—ಬಿದ್ದು ಹೋದನು.

೩೮. ಕಂಗಳ ಬಳೆ—ಕಣ್ಣುಗಳ ವಲಯ, ಆ ಶಲ್ಯನ(ನ್ನು) ಸಾರಥಿ ತೊಲಗಿಸಿದನು, ಬಸವಳಿಯೆ—(ವಶವು ಅಳಿಯೆ)—ಸ್ವಾಧೀನ ತಪ್ಪಲು, ಶಲ್ಯನನುಜನು ಒಡಹುಟ್ಟಿದನ ವೇದನೆಯ ನಿಲುಕಿ ಕಂಡನು, ನಿಲುಕಿ—ಸಮೀಪಕ್ಕೆ ಬಂದು, ಹಿಳುಕ—ಬಾಣದ ಬುಡವನ್ನು.

೩೯. ಹರಿಬವನು—ಕೆಲಸವನ್ನು, ಮಾರಾಂತನು—ಪ್ರತಿಯಾಗಿ ತೆಗೆದುಕೊಂಡನು, ಸೂತ—ಸಾರಥಿಯೇ? ಆತನ ಅಂಬ ಐದಾರ, ಮನ್ನಿಸಿ—ಸಹಿಸಿ, ಸೋತವೊಲು—(ತಾನು) ಸೋತಂತೆ, ಮನಕೊಲವ—ಅವನ ಮನಸ್ಸಿಗೆ ಉತ್ಸಾಹವನ್ನು, ನಿಶಾತ—ಹರಿತವಾದ.

ದೊರೆ ಮಡಿಯೆ ಮದ್ರಾಧಿಪನ ಬಲ ।
ತಿರುಗಿತಭಿಮನ್ಯುವಿನ ಹೊಯ್ಲಲಿ ।
ಹುರುಳುಗೆಟ್ಟುದು ಹೆಸರ ನಾಯಕವಾಡಿ ದುಗುಡದಲಿ ॥
ತರಹರವ ನಾ ಕಾಣೆನೀ ಮೋ ।
ಹರಕೆ ಗತಿಯೆಂತೆನುತ ಭಯದಲಿ ।
ಕರೆದು ತೋರಿದನಾ ಕೃಪಾಚಾರ್ಯಂಗೆ ಕಲಿ ದ್ರೋಣ ॥೪೦॥

ಮಗುವೆ ನೋಡಭಿಮನ್ಯು ನಮಗಿದು ।
ಹೊಗುವೊಡಳವೇ ಕಾಲ ರುದ್ರನ ।
ತಗಹು ಬಿಟ್ಟಂತಿದೆ ಕುಮಾರನ ಕೋಪದಾಟೋಪ ॥
ಮೊಗಸಲರಿದು ಭುಜಪ್ರತಾಪದ ।
ಹೊಗರು ಹೊಸ ಪರಿಯೆಂದು ರಿಪುವನು ।
ಹೊಗಳುತಿರೆ ಕೇಳಿದನು ಕೌರವರಾಯನೀ ನುಡಿಯ ॥೪೧॥

ಕೇಳುತಿರ್ದೈ ಕರ್ಣ ಸಲೆ ಸ ।
ಮ್ಮಾಳ ಹೆದರಿಸಿ ರಿಪುಭಟನನಾ ।
ಳೇಳಿಸುವ ಬಾಹಿರತನವ ನಾನೇನ ಹೇಳುವೆನು ॥
ಖೂಳರೆಂಬಿವೆ ಗುರುಗಳಿಂದು ವಿ ।
ಶಾಳ ಮತಿಗಳು ನಮ್ಮ ಭಾಗ್ಯದ ।
ಮೇಲೆ ದೈವವ ಬಯ್ದು ಫಲವೇನೆಂದು ಬಿಸುಸುಯ್ದ ॥೪೨॥

ಎನಲು ದುಶ್ಶಾಸನನು ರಾಯನ ।
ಕನಲಿದನು ಖತಿಯೇಕೆ ಜೀಯಿಂ ।
ದೆನಗೆ ಬೆಸಸಾ ಸಾಕು ಭಂಡರ ಬಯ್ದು ಫಲವೇನು ॥

---

೪೦. ಮದ್ರಾಧಿಪ–ಶಲ್ಯ, ತರಹರ–ಸಹಿಸುವಿಕೆ.

೪೧. ಅಭಿಮನ್ಯು ಮಗುವೆ ನೋಡು– ಅಭಿಮನ್ಯುವು ಹುಡುಗನೇ ? ನೋಡು, ಕಾಲರುದ್ರನ–ಕಾಲರುದ್ರನನ್ನು, ತಗಹು ಬಿಟ್ಟಂತಿದೆ–ಸ್ವೇಚ್ಛೆಯಾಗಿ ಬಿಟ್ಟಂತಿದೆ, ಮೊಗಸಲು– (ಯುದ್ಧಕ್ಕೆ) ತೊಡಗಲು.

೪೨. ಆಳೇಳಿಸು – ಪ್ರೋತ್ಸಾಹಿಸು, ಬಾಹಿರತನ – ನೀಚತನ. ಇಂದು – ಈ ಸಂದರ್ಭದಲ್ಲಿ.

೪೩. ಕನಲಿದನು – ಕೋಪಿಸಿಕೊಂಡನು. ಜೀಯ ! ಇಂದು ಎನಗೆ ಬೆಸಸಾ,

ದಿನಪ ದೀವಿಗೆಯಾಗಲುಳಿದೀ |
ಬಿಸುಗುವೆಳಗಿನ ಹಂಗು ಬೇಹುದೆ |
ದನುಜ ದಿವಿಜರ ದಳಕೆ ತನ್ನನು ಬಿಟ್ಟು ನೋಡೆಂದ ||೪೩||

ವೀರರಂಗವನೆತ್ತ ಬಲ್ಲರು |
ಹಾರುವರು ಬೆಳುದಿಂಗಳಿನ ಬಿರು |
ಸಾರ ಸುಡುವುದು ಕೈದುವಿಡಿದೊಡೆ ಕಲಿಗಳೇ ದ್ವಿಜರು ||
ವೈರಿ ಭಟನಿವ ಮಗುವಲೇ ಮನ |
ವಾರೆ ಕಾದಲು ಲೆಕ್ಕವಲ್ಲೀ |
ಯೂರುಗರ ಬಯ್ದೇನು ಫಲವೆಂದೆನುತ ಹೊರವಂಟ ||೪೪||

ತಳಿತುದೆಡಬಲವಂಕದಲಿ ಹೆ |
ಬ್ಬಲ ಭಡಾಳಿಸಿ ಮೊರೆವ ಭೇರಿಯ |
ಘುಳುಘುಳುಧ್ವನಿ ನೆಗೆಯೆ ಬಿರಿದುದು ಕಮಲಜಾಂಡ ಘಟ ||
ಹಳವಿಗೆಯ ಸೀಗುರಿಯ ಚಮರಾ |
ವಳಿಯ ವಿಮಲಚ್ಛತ್ರ ಸಂಖ್ಯೆಯ |
ವಳಯದಲಿ ನಭ ಮುತ್ತೆ ಮುಸುಕಿತು ಸೇನೆ ರಿಪುಭಟನ ||೪೫||

ತಿರುಹು ತೇಜಿಯನಿತ್ತಲವದಿರ |
ನೊರಸಿ ದುಶ್ಯಾಸನನ ಬೆನ್ನಲಿ |
ಕರುಳ ತೆಗೆವೆನು ನೋಡು ಸಾರಥಿ ಬೆಚ್ಚಬೇಡೆನುತ ||
ಅರಗಿನರಸನು ನಿಲುವನೇ ದ |
ಳ್ಳುರಿಯ ಮನೆಯಲಿ ಹೊಕ್ಕು ನಿಮಿಷದೊ |
ಳೊರಸಿದನು ಚತುರಂಗ ಬಲವನು ಕೌರವಾನುಜರ ||೪೬||

ಎಲವೊ ಕೌರವನನುಜ ನರಿ ಹೆ |
ಬ್ಬುಲಿಯ ಶಿಶುವನು ಬೇಡುವಂದದೊ |
ಳಳವನರಿಯದೆಯಧಮರಧಿಕನ ಕೂಡೆ ತೊಡಕುವುದೆ ||

---

ದಿನಪ—ಸೂರ್ಯನು, ಬಿನುಗುವೆಳಗು—ಮಿಣುಕುದೀಪ, ಬೇಹುದೆ—ಬೇಕಾಗುವುದೆ?

೪೪. ಹಾರುವರು—ಬ್ರಾಹ್ಮಣರು, ವೀರರ, ಅಂಗ—ರೀತಿ, ಬೆಳುದಿಂಗಳಿನ ಬಿರಿಸು ಆರ ಸುಡುವುದು? ಮಗುವಲೇ—ಹುಡುಗನಷ್ಟೆ? ಊರುಗರು—ಹಳ್ಳಿಯವರು.

೪೫. ವಂಕ—ಪಕ್ಕ, ಭಡಾಳಿಸಿ—ಹೆಚ್ಚಿ, ಹಳವಿಗೆ—ಧ್ವಜ, ಸೀಗುರಿ—ಸೂರೇಪಾನ.

೪೬. ಅವದಿರ—ಅವರನ್ನು, ಹೊಕ್ಕು ನಿಲುವನೇ, ಕೌರವಾನುಜರ ಚತು....ವನು.

೪೭. ಅಧಮರು, ಅಧಿಕನಕೂಡೆ, ತಲೆವೆರಸಿ—ತಲೆಯನ್ನು ಳಿಸಿಕೊಂಡು, ಶರ ಸಂನ್ಯಾಸ—

ಮಲೆತು ನಿಂದೆಚ್ಚಾಡಿ ರಣದಲಿ ।
ತಲೆವೆರಸಿ ಮರಳಿದಡೆ ಕೈದುವ ।
ನಿಳುಹುವೆನು ಬಳಿಕೇನು ಶರಸಂನ್ಯಾಸ ತನಗೆಂದ ॥೪೭॥

ಸಾಕು ತರುವಲಿತನದ ಮಾತುಗ ।
ಳೇಕೆ ತೆಗೆ ರಣದೊಳಗೆ ನೀನವಿ ।
ವೇಕತನದಲಿ ಮೆಯ್ಮರೆದ ಹೊಳ್ಳಿಗರ ನೆರೆಹೊಯ್ದೆ ॥
ಆ ಕಿರೀಟಿ ವೃಕೋದರರ ಕೈ ।
ಸೋಕಿದೊಡೆ ಸಂತೋಷ ನೀನವಿ ।
ವೇಕಿ ಬಾಲಕನೇನಮಾಡುವೆನೆಂದನವ ನಗುತ ॥೪೮॥

ಕೊಳಚೆ ನೀರನು ದಾಂಟಲರಿಯದೆ ।
ಜಲಧಿ ಕಾಲ್ಹೊಳೆಯೆಂಬ ಭಂಡರ ।
ಮುಳಿದು ಮಾಡುವುದೇನು ಮೊದಲಲಿ ನಮ್ಮ ನೀ ಗೆಲಿದು ॥
ಬಳಿಕ ಭೀಮಾರ್ಜುನರ ಬಯಸುವು ।
ದೆಲೆ ಮರುಳೆ ನಿನ್ನೊಡಲ ಹೊಳ್ಳಿಸಿ ।
ತಿಳಿ ರಕುತದಲಿ ತಾಯ ತುರುಬನು ನಾದಿಸುವೆನೆಂದ ॥೪೯॥

ಕಾತರಿಸದಿರು ಬಾಲಭಾಷೆಗ ।
ಳೇತಕವು ನೀ ಕಲಿತ ಬಿಲು ವಿ ।
ದ್ಯಾತಿಶಯವುಂಟಾದೊಡದ ತೋರುಳಿದ ಮಾತೇನು ॥
ಭೀತ ಭಟರನು ಹೊಳ್ಳುಗಳೆದ ವೃ ।
ಥಾತಿರೇಕಕೆ ಠಾವಿದಲ್ಲೆಂ ।
ದೀತನೆಚ್ಚನು ನೂರು ಬಾಣದಲಿಂದ್ರಸುತಸುತನ ॥೫೦॥

ಬಿಲ್ಲ ಹಿಡಿಯಲು ಕೌರವಾನುಜ ।
ಬಲ್ಲ ನೋಡೈ ಸೂತ ಮಿಗೆ ತ ।
ಪ್ಪಲ್ಲ ತಪ್ಪಲ್ಲಂಬು ಬಿದ್ದುವು ಗುರಿಯ ಸರಿಸದಲಿ ॥

---

ಶಸ್ತ್ರತ್ಯಾಗ (ಇನ್ನು ಮೇಲೆ ಬಾಣವನ್ನು ಹಿಡಿಯುವುದಿಲ್ಲವೆಂಬ ಪ್ರತಿಜ್ಞೆ).

೪೮. ಹೊಳ್ಳಿಗರು—ಬಲಹೀನರು; ಕಿರೀಟಿ—ಅರ್ಜುನ.

೪೯. ಕಾಲ್ಹೊಳೆ—ಕಾಲುಹೊಳೆ, ಹೊಳ್ಳಿಸಿ—ನಿಸ್ಸಾರಮಾಡಿ, ತಾಯ—ದ್ರೌಪದಿಯ.

೫೦. ಕಾತರಿಸದಿರು—ದುಡುಕಬೇಡ, ವೃಥಾತಿರೇಕ—ವ್ಯರ್ಥವಾದ ಹೆಚ್ಚುಗೆ.

೫೧. ಬಿಲ್ಲ.......ಸೂತ—ಹಿಯ್ಯಾಳಿಸುವ ಮಾತು, ಸರಿಸ—ಸದೃಶ (ಸಂ.)—ಎದುರಿನಲ್ಲಿ

ನಿಲ್ಲು ನಿಲ್ಲಾದಡೆಯೆನುತ ಬಲು |
ಬಿಲ್ಲ ನೇವರಿಸಿದು ಶರೌಘವ |
ದೆಲ್ಲಿ ನೆಲ ನಭವೆತ್ತಲೆನೆ ಗಾಢಿಸಿದುವಂಬುಗಳು ||೫೧||

ಅವನ ಕೂರಂಬುಗಳ ಕಡಿದವ |
ನವಯವವ ಕೀಲಿಸಿದು ಕೆಲಬಲ |
ವವನಿಯಲಿ ಕೆಡೆಬೀಳ್ಕಿಯುಗಿದುವು ಭಟನ ಕಿಬ್ಬದಿಯ ||
ಅವಗಡಿಸಿ ಖಾತಿಯಲಿ ಖಳ ಶರ |
ನಿವಹವನು ತುಡುಕಿದನು ಕೆದರಿದ |
ನವನು ನಿಮಿಷದೊಳರ್ಜುನಾತ್ಮಜನಗಣಿತಾಸ್ತ್ರದಲಿ ||೫೨||

ತಾಯ ತುರುಬಿಗೆ ಹಾಯ್ದ ಪಾತಕ |
ನಾಯ ಕೂಡಾಡುವುದೆ ಕೊಬ್ಬಿದ |
ಕಾಯವನು ಕಡಿಕಿರಿದು ನೆತ್ತರ ನೊರೆಯ ಬಾಸಣಿಸಿ ||
ತಾಯ ಕರಸುವೆನೆನುತ ಕಮಲದ |
ಳಾಯತಾಂಬಕನಳಿಯನನುಪಮ |
ಸಾಯಕವ ಹೂಡಿದನು ನೋಡಿದನಂದು ಚಿತ್ತದಲಿ ||೫೩||

ಇವನ ಕೊಂದಡೆ ತಂದೆ ಮಿಗೆ ಮೆ |
ಚ್ಚುವನೊ ಮುನಿವನೊ ತನ್ನ ನುಡಿ ಸಂ |
ಭವಿಸೆ ನುಡಿವನೊ ಭೀಮಸೇನನ ಭಾಷೆಗಂಜುವೆನು ||

---

(ಎಂದರೆ ಗುರಿಯನ್ನು ತಾಕಲಿಲ್ಲವೆಂದರ್ಥ), ಬಲುಬಿಲ್ಲ ನೇವರಿಸಿದ—ದೊಡ್ಡದಾದ ಬಿಲ್ಲನ್ನು ಸರಿಪಡಿಸಿದನು.

೫೨. ಅವನ—ದುಶ್ಶಾಸನನ, ಕೀಲಿಸಿದು—ನಾಟಿ, ಕೆಲಬಲವ—ಪಕ್ಕದ ಸೈನ್ಯವನ್ನು, ಉಗಿದುವು—(ಅಭಿಮನ್ಯುವಿನ ಬಾಣಗಳು) ಚುಚ್ಚಿದುವು, ಭಟನ—ದುಶ್ಶಾಸನನ, ಕಿಬ್ಬದಿ—ಕಿಳ್ಬದಿ—ಬದಿಯ ಕೆಳಗು, ಅವಗಡಿಸಿ—ದೂಷಿಸಿ, ಖಳ—ನೀಚನಾದ (ದುಶ್ಶಾಸನನು), ತುಡುಕಿದನು—ತೆಗೆದುಕೊಂಡು ಹೊಡೆದನು, ಅವನು—ಆ ಬಾಣಗಳನ್ನು, ಕೆದರಿದನು— ಚದರಿಸಿದನು.

೫೩. ತುರುಬಿಗೆ ಹಾಯ್ದ—ತುರುಬನ್ನು ಸೆಳೆದ, ಪಾತಕನಾಯ—ಪಾತಕನಾದ ನೀಚನನ್ನು, ಕಡಿಕಿರಿದು—ತುಂಡುತುಂಡಾಗಿ ಕತ್ತರಿಸಿ, ನೆತ್ತರ ನೊರೆಯ—ನೊರೆ ನೆತ್ತರನ್ನು, ಬಾಸಣಿಸಿ—ಮುಚ್ಚಿಟ್ಟದ್ದು, ಕಮಲ ದಳಾಯತಾಂಬಕನಳಿಯ—ಕೃಷ್ಣನ ಸೋದರಳಿಯನಾದ ಅಭಿಮನ್ಯು.

೫೪. ತಂದೆ—ಭೀಮಸೇನ ಸಂಭವಿಸೆ—ಸಂಭಾವಿಸಿ—ಒಪ್ಪಿ, ತೊಡಕು – ಗೋಜು,

ಇವನ ತೊಡಕೇ ಬೇಡ ಕದನದೊ |
ಳಿವನ ತಾನೇ ಕೊಲಲಿ ಸಾಕಿ |
ನ್ನಿವನ ಭಂಗಿಸಿ ಬಿಡುವೆನೆಂದನು ತನ್ನ ಮನದೊಳಗೆ ||೫೪||

ಕಾಯ್ದು ಕೊಳ್ಳೈ ಕೌರವಾನುಜ |
ಹೊಯ್ದು ಹೋಗಲು ಬಹುದು ಹರನಡ |
ಹಾಯ್ದಡೆಯು ಗೆಲುವೆನು ಕಣಾ ನಿಲ್ಲೆನುತ ತೆಗೆದಿಸಲು ||
ಬಾಯ್ದೆಗೆದು ಕೇಸುರಿಯ ಕಾರುತ |
ಕೈದುವೆದೆಯಲಿ ಕೊಂಡು ಬೆನ್ನಿಗೆ |
ಹಾಯ್ದಡವನೋರ್ಗುಡಿಸಿದನು ಕುರುಸೇನೆ ಕಳವಳಿಸೆ ||೫೫||

ಅಹಹ ಕೈತಪ್ಪಾಯ್ತು ರಾಯನ |
ಸಹಭವನು ನೊಂದನು ಶಿವಾ ಎನು |
ತಹಿತ ಬಲ ಮುರಿದೋಡೆ ಸಾರಥಿ ತಿರುಹಿದನು ರಥವ ||
ಬಹಳ ಬಲ ನುಗ್ಗಾಯ್ತು ಶಿಶುವಿನ |
ಸಹಸ ಕುಸಿಯದೆನುತ್ತ ಖತಿಯಲಿ |
ಮಿಹಿರ ಸುತನಡಹಾಯ್ದು ತಡೆದನು ಮತ್ತೆ ಬಾಲಕನ ||೫೬||

ಸಾರು ಸಾರಭಿಮನ್ಯು ಫಡ ಇ |
ನ್ನಾರ ಬಸಿರನು ಹೊಗುವೆ ನಿನ್ನವ |
ರಾರ ಸಂತತಿ ಮಾಡಿಕೊಳಲಿ ಭವದ್ವಿಯೋಗದಲಿ ||
ಭೂರಿ ಬಲವನು ಸದೆದ ಗರ್ವವಿ |
ದಾರ ಕೂಡೆ ಧನುರ್ಧರಾಗ್ರಣಿ |
ವೀರ ಕರ್ಣ ಕಣಾ ಎನುತ ತೆಗೆದೆಚ್ಚನತಿರಥನ ||೫೭||

---

ಭಂಗಿಸಿ—ಸೋಲಿಸಿ.

೫೫. ಹೊಯ್ದು ಹೋಗಲುಬಹುದು—(ನಾನು ನಿನ್ನನ್ನು) ಕೊಂದುಹಾಕಬಲ್ಲೆನು, ಕೇಸುರಿ—ಕೆಚ್ಚನೆ+ಉರಿ—ಕೆಂಪು ರಕ್ತ, ಕೈದು—ಆಯುಧ (ಬಾಣ), ಕೊಂಡು—ಚುಚ್ಚಿಕೊಂಡು, ಹಾಯ್ದಡೆ—ಹೊರಡಲು, ಓರ್ಗುಡಿಸಿದನು—ಗುಡ್ಡೆಯಾಗಿ ಬಿದ್ದನು.

೫೬. ಸಹಭವ — ಒಡಹುಟ್ಟಿದವನು, ಸಾರಥಿ—(ದುಶ್ಶಾಸನನ) ಸಾರಥಿ, ಸಹಸ—ಸಾಹಸ, ಮಿಹಿರ ಸುತನು—ಸೂರ್ಯನಮಗ—ಕರ್ಣ.

೫೭. ಇನ್ನಾರ ಬಸುರನು ಹೊಗುವೆ — ಯಾರ ಹೊಟ್ಟೆಯಲ್ಲಿ ಹುಟ್ಟುವೆ (ಎಂದರೆ, ನಿನ್ನನ್ನು ಈಗ ನಾನು ಕೊಲ್ಲುವೆನೆಂದರ್ಥ), ಭವದ್ವಿಯೋಗದಲಿ — ನಿನ್ನ ಸಾವಿನಿಂದ, ಆರ, ಸಂತತಿಮಾಡಿಕೊಳಲಿ—ಮಗನನ್ನಾಗಿ ಮಾಡಿಕೊಳ್ಳಬೇಕು ? ಗರ್ವವು ಇದು ಆರಕೂಡೆ ?

ಬಲ್ಲೆನುಂಟುಂಟಖಿಳ ವೀರರೊ ।
ಳಿಲ್ಲ ಸರಿದೊರೆ ನಿನಗೆ ಬಾಯಲಿ ।
ಬಲ್ಲಿದನು ನೀನಹೆ ಭಟಾಂಗದ ಮಾತದಂತಿರಲಿ ॥
ಒಳ್ಳೆ ಗಡ ಪಾವುಡವ ವಾಸುಗಿ ।
ಯಲ್ಲಿ ಕಟ್ಟಿತು ಗಡ ಮಹಾಹವ ।
ಮಲ್ಲ ಮಡಮುರಿಯದಿರೆನುತ ತೆಗೆದೆಚ್ಚನಭಿಮನ್ಯು ||೫೮||

ಇರುಳು ರಾಯನ ಮನೆಗೆ ಕಪ್ಪವ ।
ತೆರುವುದೇ ಹಗಲೆಲವೊ ಕೆಲಬರ ।
ಮುರಿದ ಗರ್ವವಿದಾರೊಡನೆ ಫಡ ಮರುಳೆ ಮರಳೆನುತ ॥
ಸರಳ ಸರಿವಳೆಯಿಂದ ಸುಭಟನ ।
ಭರದಿ ಕವಿಸಿದನೇನನೆಂಬೆನು ।
ಗಿರಿಯ ಮುತ್ತಿದ ಮಿಂಚುಬುಳುವಿನ ಮಿನುಗಿನಂದದಲಿ ||೫೯||

ಸುರಪನಂಕುಶ ನುಸುಳಿದಡೆ ಮೈ ।
ಯ್ಯರಿವುದೈರಾವತಕೆ ಕಬ್ಬಿನ ।
ಲಿರಿದೊಡಂಜಿಕೆಯುಂಟೆ ನಿನ್ನಯ ಕಣೆಗಳಾಂಕಿದಡೆ ॥
ತೆರಳುವನೆ ಅಭಿಮನ್ಯುವೆನುತ ।
ಬ್ಬರಿಸಿ ಕರ್ಣನ ಕಾಯವನು ಹೊಗ ।
ಲಿರಿದನೆಂಟಂಬಿನಲಿ ತೋದುದು ತೇರು ರಕುತದಲಿ ||೬೦||

ಮಳೆಗೆ ಮೊಗದಿರುಹುವುದೆ ಬಡಬಾ ।
ನಳನೆಲವೊ ನಿನ್ನಂಬುತಾಗಿದ ।
ಡಳುಕುವೆನೆ ತಾನೆನುತ ರವಿಸುತನೆಚ್ಚನತಿರಥನ ॥
ಹಿಳುಕುಗಳ ಮುಗುಳಂಬುಗಳು ಸಲೆ ।
ತಳಿತುವಭಿಮನ್ಯುವಿನ ಮೆಯ್ಯಲಿ ।
ಬಳಸಿ ಮರಿದುಂಬಿಗಳು ಕೆಂದಾವರೆಗೆ ಕವಿದಂತೆ ||೬೧||

---

೫೮. ಬಾಯಲಿ ಬಲ್ಲಿದನು—ಮಾತಿನಲ್ಲಿ ಗಟ್ಟಿಗ, ಭಟಾಂಗದ ಮಾತು—ವೀರಾಲಾಪ, ಒಳ್ಳೆ—ನೀರಹಾವು, ವಾಸುಗಿಯಲ್ಲಿ—ಆದಿಶೇಷನಮೇಲೆ, ಪಾವುಡವ ಕಟ್ಟಿತು ಗಡ—ನಡುಕಟ್ಟು ಕಟ್ಟಿತಲ್ಲವೆ (ಎಂದರೆ ಯುದ್ಧಕ್ಕೆ ನಿಂತಿತಲ್ಲವೆ?), ಮಡ—ಹಿಮ್ಮಡಿ.

೫೯. ಇರಳುರಾಯು—ಕತ್ತಲೆಯೆಂಬ ದೊರೆ, ಹಗಲು—ಬೆಳಕು.

೬೦. ನುಸುಳಿದಡೆ—ಚುಚ್ಚಿದರೆ, ಮೈಯರಿವುದು — ಮೈ ಸೀಳುವುದು, ಹೊಗಲು—ಚುಚ್ಚಿಕೊಳ್ಳುವಂತೆ.

೬೧. ಹಿಳುಕುಗಳ—ಗರಿಗಳುಳ್ಳ, ಮುಗುಳಂಬುಗಳು—ಮೊನಚಾದ ಬಾಣಗಳು.

ಹೂಣಿಗರು ಕೆಲರಿವದಿರಿವದಿರ |
ಗೋಣನರಿದಡೆಯಿವರ ಜೀವದ |
ಕೇಣಿಕಾರರು ಖಾತಿಗೊಂಜರು ಭೀಮ ಫಲುಗುಣರು ||
ಮಾಣಲಿವದಿರ ಮತ್ತೆ ರಣವನು |
ಕಾಣೆನದಕಿನ್ನೇನೆನುತ್ತ |
ಕ್ಷೀಣ ಭುಜಬಲನೆಚ್ಚು ಕರ್ಣನ ಧನುವ ಖಾಡಿಸಿದ ||೬೨||

ಕಯ್ದು ಮುರಿಯಲು ಮುಂದು ನೂಕದೆ |
ಹಾಯ್ದನೀ ರವಿಸೂನು ಬಳಿಕಡ |
ಹಾಯ್ದು ಬವರವ ಹಿಡಿದನಾ ಕರ್ಣಾತ್ಮಜನು ಕಡುಗಿ ||
ಆಯ್ದು ಬಾಣದೊಳವನ ಕೊರಳನು |
ಕೊಯ್ದನರ್ಜುನಸೂನು ನಿಮಿಷದೊ |
ಳೊಯ್ದರಂತಕ ದೂತರದ್ಭುತವಾಯ್ತು ಸಮರಂಗ ||೬೩||

ಗಾಯವಡೆದನು ಶಲ್ಯನೀ ಕುರು |
ರಾಯ ಕೈದುವ ಬಿಸುಟನಾ ಕುರು |
ರಾಯನನುಜರು ಬದುಕುವರೆ ಮೆಯ್ಯೆಲ್ಲ ಬಾಣಮಯ ||
ಸಾಯದುಳಿದವರಿಲ್ಲ ಮಿಕ್ಕಿನ |
ನಾಯಕರೊಳಿಂದಕಟ ಕುರುಬಲ |
ಬಾಯ ಬಿಟ್ಟುದು ಶಲ್ಯಸುತ ನಿದಿರಾದನಾಹವಕೆ ||೬೪||

ಆ ಕುಮಾರನ ಸೇನೆ ಗಡಣಿಸಿ |
ಸೂಕಿತುರವಣಿಸಿತು ಮಹಾರಥ |
ಜೋಕೆಯಿಭತತಿ ತೂಳಿದುವು ತುಡುಕಿದುವು ಹಯನಿಚಯ ||

---

೬೨. ಕೆಲರು ಇವದಿರು ಹೂಣಿಗರು, ಇವದಿರ ಗೋಣನು (ಕೊರಳನ್ನು) ಅರಿದಡೆ, ಕೇಣಿಕಾರರು-(ವ್ಯಾಪಾರಿಗಳು) ಗೊತ್ತುಗಾರರು, ಕ್ರೇಣಿ (ಸಂ.), ಮಾಣಲಿವದಿರ-ಇವರನ್ನು ಬಿಟ್ಟರೆ, ರಣವನು ಕಾಣೆನು-(ನನಗೆ) ಯುದ್ಧವಿಲ್ಲ, ಅಕ್ಷೀಣ-ಕುಂದದ.

೬೩. ಮುಂದು ನೂಕದೆ-ಮುಂದುವರಿಯದೆ, ಹಾಯ್ದನು - ಹೊರಟುಹೋದನು, ಕರ್ಣಾತ್ಮಜ-ವೃಷಸೇನ.

೬೪. ಮಿಕ್ಕಿನ ನಾಯಕರೊಳು ಇಂದು ಸಾಯದೆ ಉಳಿದವರಿಲ್ಲ.

೬೫. ಗಡಣ-ಘಟನಾ (ಸಂ.), ಮಹಾರಥ-(ಶಲ್ಯನ ಮಗನ) ದೊಡ್ಡರಥ. ಉರವಣಿಸಿತು-ಗರ್ವದಿಂದ ನುಗ್ಗಿತು, ಜೋಕೆಯಿಭತತಿ-ಜಾಗರೂಕತೆಯುಳ್ಳ ಆನೆಯಗುಂಪು. ತೂಳಿ

ತೋಕಿದುವು ಕೈದುಗಳು ಸಮರಣ |
ದಾಕೆವಾಳರ ಸನ್ನೆಯಲಿ ಸಮ |
ರಾಕುಳರು ಕೆಣಕಿದರು ರಿಪು ಕಲ್ಪಾಂತ ಭೈರವನ ||೬೫||

ಭಟ ಛಡಾಳಿಸಿದನು ಘೃತಾಹುತಿ |
ಘಟಿಸಿದಗ್ನಿಯವೋಲು ರಣ ಚೌ |
ಪಟ ಚತುರ್ಬಲದೊಳಗೆ ಹೊಕ್ಕನು ಸಿಂಹನಾದದಲಿ ||
ನಿಟಿಲನೇತ್ರನ ಕೋಪಶಿಖಿ ಲಟ |
ಲಟಿಸಿದಂತಿರೆ ಹೆಚ್ಚಿದರಿಬಲ |
ದಟವಿಯನು ಸವರಿದನು ಸುರಿಸುತ ಸರಳ ಸರಿವಳೆಯ ||೬೬||

ಧರೆ ಬಿರಿಯೆ ಬೊಬ್ಬೆಯಲಿ ಬಲದ |
ಬ್ಬರಣೆ ದೆಕ್ಕಾದೆಕ್ಕಿಯಾಗಲು |
ಧರಣಿಪತಿ ಹಲುಬಿದನು ಮಗನೇಸಾದನಕಟೆನುತ ||
ಕರೆದು ಭೀಮನ ನಕುಲನನು ಸಂ |
ಗರಕೆ ಧೃಷ್ಟದ್ಯುಮ್ನ ದ್ರುಪದರ |
ಧುರಕೆ ಪರುಠವಿಸಿದನು ಸೌಭದ್ರಂಗೆ ಪಡಿಬಲವ ||೬೭||

ಗದೆಯ ತಿರುಹುತ ಸಿಂಹನಾದದೊ |
ಳೊದರಿ ಮಗನಾವೆಡೆಯೆನುತ ನೂ |
ಕಿದನು ರಥವನು ತನ್ನ ಸೇನೆಗೆ ಚೌರಿಯನು ಬೀಸಿ ||
ಅಧಟನೈತರೆ ಹೋಗಲೀಯದೆ |
ಮೊದಲ ಬಾಗಿಲ ಕಟ್ಟಿಕೊಂಡ |
ಗ್ಗದ ಜಯದ್ರಥ ಭೀಮನಲಿ ಬಲುಕಾಳೆಗವ ಹಿಡಿದ ||೬೮||

---

ದುವು—ಮುತ್ತಿದುವು, ತುಡುಕಿದುವು—ನುಗ್ಗಿದುವು, ಸಮರಣದ—ಎದುರು ಕಕ್ಷಿಯ, ತೋಕಿದುವು—ಹೊಡೆದುವು, ಸಮರಾಕುಳರು—ಯುದ್ಧೋತ್ಸಾಹಿಗಳು.

೬೬. ಭಟ—ಶೂರನಾದ (ಅಭಿಮನ್ಯು), ಛಡಾಳಿಸಿದನು— ಉಬ್ಬಿದನು, ಘಟಿಸಿದ—ಸೇರಿದ, ರಣಚೌಪಟ—ರಣದ ಮಧ್ಯಭಾಗ, ಚೌಪಟ—ಚತುಷ್ಪಥ (ಸಂ.), ಲಟಲಟಿಸು—ತಳಮಳಿಸು.

೬೭. ದೆಕ್ಕಾದೆಕ್ಕಿಯಾಗಲು—ಹೆಚ್ಚಲು, ಹಲುಬಿದನು— ದುಃಖಪಟ್ಟನು, ಸೌಭದ್ರ—ಅಭಿಮನ್ಯು, ಪಡಿ ಬಲ—ಸಹಾಯಸೈನ್ಯ.

೬೮. ಮಗನು— ಅಭಿಮನ್ಯುವು, ಆವೆಡೆ—ಎಲ್ಲಿದ್ದಾನೆ, ಚೌರಿಯನು—ಚಾಮರವನ್ನು, ಬೀಸಿ—ಆಡಿಸಿ—ಸಂಜ್ಞೆಮಾಡಿ. ಅಧಟನು—ಶೂರನು—ಭೀಮನು, ಅಗ್ಗದ—ಗಟ್ಟಿಗನಾದ.

ತೆರಹು ಗುಡುಗುಡು ಎಲೆ ಜಯದ್ರಥ |
ಹೆರದೆಗೆದು ಮರಳೆನುತ ಹೂಣಿಗ |
ನುರುಬಿದೊಡೆ ಮಾರಾಂತು ಭೀಮನ ಕಡುಹ ನಿಲಿಸಿದನು ||
ಮರೆದು ಕಳೆಯಭಿಮನ್ಯುವನು ಕೈ |
ಮರೆಯದೆನ್ನಲಿ ಕಾದು ನೀನೆನು |
ತುರುಬಿ ಸೈಂಧವನೆಯ್ದಿದನು ಕೆಂಗೋಲ ಮಳೆಗರೆದು ||೧೯||

ಬವರದಲಿ ಕಲಿಪಾರ್ಥನಲ್ಲದೆ |
ಪವನ ತನಯಾದಿಗಳ ಗೆಲುವರೆ |
ಶಿವನ ವರವೆನಗುಂಟು ಮುನ್ನೆನುತಾ ಜಯದ್ರಥನು ||
ಕವಲುಗೋಲಲಿ ಭೀಮನನು ಪರಿ |
ಭವಿಸಿದನು ಸಹದೇವನನು ಕೆಡೆ |
ತಿವಿದು ನಕುಲನ ರಥವ ಕಡು ಪಲ್ಲಟವ ಮಾಡಿದನು ||೨೦||

ಹೊಗುವ ಧೃಷ್ಟದ್ಯುಮ್ನನನು ಮೈ |
ಯ್ದೆಗೆಯಲೆಚ್ಚನು ದ್ರುಪದ ಮೊದಲಾ |
ದಗಣಿತರ ನೋಯಿಸಿದನರೆದನು ಚಾತುರಂಗವನು ||
ಹೊಗುವ ಭರದಲಿ ಮತ್ತೆ ಬಿಲ್ಲನು |
ಬಿಗಿದ ಮುಷ್ಟಾಮುಷ್ಟಿಯಲಿ ಕೋ |
ಲುಗಳ ಕವಿಸಿದ ಭೀಮನೊಡನವಗಡಿಸಿ ಕಾದಿದನು ||೨೧||

ಮರಳು ಮರಳೆಲೆ ಭೀಮ ಮುನಿದಡೆ |
ಕೊರಳ ಕೊಯ್ವೆನು ನಿನ್ನ ಹವಣೇ |
ಹರನ ಕಾರುಣ್ಯಾವಲೋಕನ ತನಗೆ ಹಿರಿದೆನುತ ||
ಸರಳ ಮಳೆಯನು ಕರೆದು ಭೀಮನ |
ತುರಗವನು ಸೀಳಿದನು ರಣದಲಿ |
ವಿರಥರನು ಮಾಡಿದನು ಫಲುಗುಣನುಳಿಯೆ ಪಾಂಡವರ ||೨೨||

---

೧೯. ಹೆರದೆಗೆದು—ಹಿಮ್ಮೆಟ್ಟಿ, ಎಯ್ದಿದನು—(ಯುದ್ಧಕ್ಕೆ) ಬಂದನು.

೨೦. ಪವನ ತನಯ—ಭೀಮ, ಗೆಲುವರೆ—ಗೆಲ್ಲುವುದಕ್ಕೆ, ಮುನ್ನ—ಪೂರ್ವದಲ್ಲಿ (ಪಡೆದ), ಕವಲುಗೋಲು—ಕತ್ತರಿಬಾಣ, ಕಡು ಪಲ್ಲಟ—ಹೆಚ್ಚಾದ ಸ್ಥಾನಭ್ರಂಶ.

೨೧. ಮೈದೆಗೆಯಲು—ಹಿಮ್ಮೆಟ್ಟುವಂತೆ, ಅರೆದನು—ಅರೆದು ಹಾಕಿದನು, ಭರ—ವೇಗ.

೨೨. ನಿನ್ನ ಹವಣೇ—ನಿನಗೆ ಸಾಧ್ಯವೇ ?

ಪಡಿಬಲವ ಬರಲೀಯದನಿಲಜ |
ನೊಡನೆ ಸೈಂಧವ ಕಾದುತಿರಲಿ |
ವ್ಮಡಿಸಿತಾಹವವಿತ್ತ ಮೋಹರ ಮಧ್ಯರಂಗದಲಿ ||
ತೊಡಚಿ ಕೆಂಗೋಲಿನಲಿ ವೀರರ |
ಕಡಿಯುಲವನೀಪಾಲರುರುಬೆಗೆ |
ಮಿಡುಕಲಮ್ಮದೆ ಮಗ್ನರಾದರು ವೀರನುಪಟಳಕೆ ||೭೩||

ತೊಡಚಿ ಕೆಂಗೋಲುಗಳ ಮಳೆಯನು |
ಕೆಡಹುತೈತರಲವನಿಪಾಲರು |
ಮಿಡುಕಲಮ್ಮದೆ ಮನವನಿಳುಹಿ ಕುಮಾರನುಪಟಳಕೆ ||
ಅಡಗಿದರು ಬಳಿಕೀ ಕುಮಾರನ |
ಕಡುಹು ಘನವಾಯ್ತೇನನೆಂಬೆನು |
ಪಡೆಯ ತಳಪಟ ಮಾಡಿದನು ಸುರಕಟಕ ಬೆರಗಾಗೆ ||೭೪||

ಒರಸಿದನು ಹದಿನೆಂಟು ಸಾವಿರ |
ಕರಿಘಟೆಯನಯ್ವತ್ತು ಸಾವಿರ |
ತುರಗವನು ಮೂವತ್ತು ಸಾವಿರ ವರ ಮಹಾರಥರ ||
ಧುರದಿ ಲಕ್ಷ ಪದಾತಿಯನು ಸಂ |
ಹರಿಸಿ ಶಲ್ಯಕುಮಾರಕನ ಕ |
ತ್ತರಿಸಿದನು ಗೋನಾಳಿಯನು ದಿವ್ಯಾಸ್ತ್ರ ಧಾರೆಯಲಿ ||೭೫||

ಮಡಿದನಕಟಾ ನಮ್ಮ ಸಖನೆಂ |
ದಡಸಿದಳಲಿನೊಳದ್ದು ಕೋಪದ |
ಕಡಲೊಳಗೆ ಕಾಲಾಗ್ನಿರುದ್ರನ ಕಣ್ಣ ಹೋಲುವೆಯ ||

---

೭೩. ಮೋಹರ—ಪದ್ಮವ್ಯೂಹ, ತೊಡಚಿ—ಹೂಡಿ, ಕೆಂಗೋಲು—ಕೆಂಪು ಬಾಣ, ಅವನೀಪಾಲರು, ಉರುಬೆಗೆ—ಬಿರುಸಿಗೆ, ಮಿಡುಕಲಮ್ಮದೆ—ಚಲಿಸಲಾರದೆ, ವೀರನ ಉಪಟಳಕೆ, ಮಗ್ನರಾದರು—ಮಂಕಾದರು.

೭೪. ಪಡೆಯ—ಸೈನ್ಯವನ್ನು, ತಳಪಟ ಮಾಡಿದನು—ಬಯಲು ಮಾಡಿದನು (ನಾಶ ಮಾಡಿದನು.)

೭೫. ಶಲ್ಯಕುಮಾರಕನ, ಗೋನಾಳಿ—ಕೊರಲು.

೭೬. ಅಡಸಿದ—ಅತಿಶಯವಾದ, ಅಳಲಿನೊಳು—ದುಃಖದಲ್ಲಿ, ಕೋಪದ ಕಡಲೊಳಗೆ—

ಸಿಡಿದ ಮೀಸೆಯ ಬಿಗಿದ ಹುಬ್ಬಿನ |
ಜಡಿದ ರೋಮಾಂಚನದ ಖಾತಿಯ |
ಕಡುಹುಕಾರರು ಮಸಗಿದರು ದುರ್ಯೋಧನಾತ್ಮಜರು ||೭೬||

ಚಂಡ ಭುಜಬಲನೊಡನೆ ಮಕ್ಕಳ |
ತಂಡವೆದ್ದುದು ಬಿಗಿದ ಬಿಲ್ಲಿನ |
ದಂಡೆವಲಗೆ ಮುಸುಂಡಿ ಮುದ್ಗರ ಪರಶುವುಬ್ಬಣದ ||
ಗಂಡುಗಲಿಗಳು ಕವಿದರವದಿರು |
ಖಂಡೆಯದ ಮುಡುಹುಗಳ ಗಂಧದ |
ಮಂಡನದ ಮೈಗಳಲಿ ಪರಿಮಳ ಪೂರದೊಗ್ಗಿನಲಿ ||೭೭||

ತಳಿತ ಸತ್ತಿಗೆಗಳ ವಿಡಾಯಿಯ |
ಲೊಲೆವ ಚೌರಿಯ ವಜ್ರ ಮಕುಟದ |
ಹೊಳಹುಗಳ ಹೊಸ ಮಿಸುನಿಯಿಕ್ಕಿದ ಬಿರುದಿನುಬ್ಬಟೆಯ ||
ಕೆಲಬಲದ ಮೇಳಾಯತರ ವೆ |
ಗ್ಗಳೆಯ ರಾವ್ತರು ಗಗನ ನಾಲಗೆ |
ದಳೆದುದೆನೆ ಹೊಳೆಹೊಳೆವಡಾಯುಧ ಭಟರು ನೂಕಿದರು ||೭೮||

ಭಾಪುರೇ ಕೌರವ ಕುಮಾರಾ |
ಟೋಪವೊಳ್ಳಿತು ಬಂದ ಬರವಿನ |
ಚಾಪಳದೊಳೊದಗಿದಡೆ ಲೇಸಲ್ಲದಡೆ ಫಲವೇನು ||

---

ಕೋಪವೆಂಬ ಸಮುದ್ರದಲ್ಲಿ, ಅದ್ದು–ಮುಳುಗಿ, ಜಡಿದ–ಗುಂಪಾಗಿ (ಎದ್ದ), ಕಡುಹುಕಾರ–ಪರಾಕ್ರಮಶಾಲಿ, ಮಸಗಿದರು–ರೇಗಿದರು.

೭೭. ದಂಡೆವಲಗೆ–ಒಂದು ವಿಧವಾದ ಗುರಾಣಿ, ಮುಸುಂಡಿ–ಆಯುಧ ವಿಶೇಷ, ಮುದ್ಗರ–ಚಮ್ಮಟಿಗೆ ಆಯುಧ, ಪರಶು–ಗಂಡುಗೊಡಲಿ, ಉಬ್ಬಣ–ಗದೆ, ಖಂಡೆಯದ ಮುಡುಹುಗಳ–ಹೆಗಲಿನ ಮೇಲೆ ಕತ್ತಿಯನ್ನಿಟ್ಟುಕೊಂಡಿರುವ, ಮಂಡನದ ಮೈ–ಅಲಂಕರಿಸಿದ ಮೈ, ಪರಿಮಳ ಪೂರದೊಗ್ಗಿನಲಿ–ಹೆಚ್ಚಾದ ಸುವಾಸನೆ ಕೂಡಿದುದಾಗಿ.

೭೮. ಸತ್ತಿಗೆ–ಕೊಡೆ, ವಿಡಾಯಿ–ಆಧಿಕ್ಯ, ಒಲೆವ–ಬೀಸುತ್ತಿರುವ, ಹೊಸ ಮಿಸುನಿಯ–ಹೊಳೆಯುತ್ತಿರುವ ಚಿನ್ನದ, ಇಕ್ಕಿದ–ಧರಿಸಿರುವ. ಉಬ್ಬಟೆ–ಹೆಚ್ಚಿಕೆ, ಮೇಳಾಯತರ–ಕೂಡಿರುವವರ, ಗಗನ–ಆಕಾಶ.

೭೯. ಒಳ್ಳಿತು-ಚೆನ್ನಾಯಿತು (ಉಪಯೋಗವಿಲ್ಲದೆ ಹೋಯಿತು ಎಂಬ ಕಾಕ್ವರ್ಥ), ಬಂದ.......ಲೇಸು–ಬಂದ ಬಿರುಸಿಗೆ ತಕ್ಕಂತೆ ಅನುಕೂಲವಾದರೆ ಒಳ್ಳೆಯದು, ಕಾಪುರುಷರೈ–

ಕಾಪುರುಷರ್ರೈ ಕಾಣಬಹುದೆನು |
ತಾ ಪುರಂದರಸುತನ ಸುತ ನಿಜ |
ಚಾಪವನು ನೇವರಿಸುತಿದ್ದನು ಬಗೆಯದರಿಬಲವ ||೭೯||
ಉಗುಳುಗುಳು ಶಲ್ಯಾತ್ಮಜನ ನೀ |
ನುಗುಳದಿರ್ದಡೆ ಸೀಳಿ ಬಸಿರಲಿ |
ತೆಗೆವೆವೆಮ್ಮಯ ಸಖನನೆನುತವೆ ಲಕ್ಷಣಾದಿಗಳು ||
ತೆಗೆದಿಸುತ ಮೇಲುಕ್ಕಿದರು ತಾ |
ರೆಗಳು ನೆಣಗೊಬ್ಬಿನಲಿ ರಾಹುವ |
ತೆಗೆದು ಜೀವಿಸಬಲ್ಲವೇ ಧೃತರಾಷ್ಟ್ರ ಕೇಳೆಂದ
ಧಿಟ್ಟರಹಿರೋ ಲಕ್ಷಣರು ಜಗ |
ಜಟ್ಟಿಗಳಲಾ ರಾಜಪುತ್ರರು |
ಹುಟ್ಟರೇ ಕೆಲರೀಸು ಚಪಳತೆಯಾರಿಗುಂಟೆನುತ ||
ಕಟ್ಟಿದನು ಕಣೆಗಳನು ಸುತ್ತಲು |
ತಟ್ಟಿವಲೆಯಲಿ ಸೋಹಿದನು ಶರ |
ದೊಟ್ಟು ಪಾರ್ಥಕುಮಾರನೆಚ್ಚನು ವೈರಿ ಮೃಗಕುಲವ ||೮೧||
ಫಡ ವಿಕಾರವೆ ದೊಡ್ಡೆಗರ ಸದೆ |
ಬಡಿದ ಗರ್ವಿತತನವಕಟ ನ |
ಮ್ಮೊಡನೆಯೇ ನೋಡಿಲ್ಲಿ ಮೇಳವೆಯೆನುತ ತೆಗೆದಿಸಲು ||
ಒಡನೊಡನೆ ನಾರಾಚ ನಿಚಯವು |
ಗಡಣಿಸಿದುದೇನೆಂಬೆನವರು |
ಗ್ಗಡದ ಬಿಲುವಿದ್ಯಾತಿಶಯವನು ಸಮರ ಭೂಮಿಯಲಿ ||೮೨||





---

ಅಲ್ಪರಯ್ಯಾ, ನೇವರಿಸು—ತೀಡು, ಬಗೆಯದೆ ಲಕ್ಷ್ಯಮಾಡದೆ.

೮೦. ಬಸಿರಲಿ-(ನಿನ್ನ) ಹೊಟ್ಟೆಯಿಂದ, ಎನುತವೆ—ಎನ್ನುತ್ತ, ಲಕ್ಷಣ—ದುರ್ಯೋಧನನ ಮಗ, ನೆಣ—ಕೊಬ್ಬು, ನೆಣಗೊಬ್ಬಿನಲಿ—ಮದದಿಂದ, ತೆಗೆದು—ಪ್ರತಿಭಟಿಸಿ.

೮೧. ಚಪಳತೆ—ಚಾಕಚಕ್ಯ, ಕಟ್ಟಿದನು ಕಣೆಗಳನು ತಟ್ಟಿವಲೆಯಲಿ—ತಡಿಕೆಯಾಕಾರದಲ್ಲಿ ಬಾಣಗಳಿಂದ ಬಲೆಯನ್ನು ಕಟ್ಟಿದನು, ಶರದೊಟ್ಟು—ಬಾಣವನ್ನು ಹೂಡಿ, ಸೋಹಿದನು—ಬೇಟೆಯಾಡಿದನು.

೮೨. ಫಡ ವಿಕಾರವೆ—ನಿನ್ನ ಮೆರೆವಿಕೆಯನ್ನು ಸುಡು! ದೊಡ್ಡೆಗರ—ದೊಂಬಿಯಲ್ಲಿನ ಜನರನ್ನು, ಗರ್ವಿತತನವು ನಮ್ಮೊಡನೆಯೇ! ಅಕಟ! ಮೇಳವೆ—(ನೀನು ನಮಗೆ) ಜತೆಯೇ, ಒಡನೊಡನೆ—ಮೇಲೆ ಮೇಲೆ, ನಾರಾಚ—ಬಾಣ.

ಆ ಸುಯೋಧನ ಸುತರ ಸರಳ ವಿ ।
ಲಾಸವನು ಖಂಡಿಸಿದನಾತನ ।
ಬೀಸರಕೆ ಬಂದಡ್ಡಬೀಳುವ ಭಟರ ಕೆಡೆಯೆಚ್ಚ ॥
ರೋಷವಹ್ನಿಯ ಕೆದರಿ ಸುರಿವ ಮ ।
ಹೀಶರನು ಮಾಣಿಸಿದನವರನು ।
ವಾಸವನ ಮೊಮ್ಮಗನುದಾರ ಸಮಗ್ರ ಸಮರದಲಿ ॥೮೩॥

ಸರಳ ಮೊನೆಯಲಿ ವೈರಿ ಸುಭಟರ ।
ಕೊರಳ ಕೊರೆದನು ರಣದೊಳಾಡುವ ।
ಮರುಳು ಬಳಗವ ತಣಿಸಿದನು ಕಡಲಾದುದರುಣಜಲ ॥
ತರಳನರೆಯಟ್ಟಿದನು ರಣದಲಿ ।
ದುರುಳ ದುರಿಯೋಧನನ ಮಕ್ಕಳ ।
ಮರಳಲೀಯದೆ ಭಟರ ಕೇಣಿಯ ಕೊಂಡನಭಿಮನ್ಯು ॥೮೪॥

ಉರಗನಿಕ್ಕಡಿಗಾರ ಹುಲ್ಲಿನ ।
ಸರವಿಗಂಜುವುದುಂಟೆ ಕರ್ಣಾ ।
ದ್ಯರನು ಕಡ್ಡಿಗೆ ಬಗೆವನೀ ಹಾಹೆಗಳ ಗಣಿಸುವನೆ ॥
ಎರಡು ಸರಳಲಿ ಲಕ್ಷ್ಮಣನ ಕ।
ತ್ತರಿಸಿದನು ಹದಿನೆಂಟು ಬಾಣದೊ ।
ಳರಿದನುಳಿದ ಕುಮಾರಕರನಭಿಮನ್ಯು ನಿಮಿಷದಲಿ ॥೮೫॥

ತಳಿತ ಚೂತದ ಸಸಿಗಳವನಿಗೆ ।
ಮಲಗುವಂತಿರೆ ರಾಜಪುತ್ರರು ।
ಹೊಳೆವ ಪದಕದ ಕೊರಲ ತಲೆಗಿಂಬಾದ ತೋಳುಗಳ ॥

---

೮೩. ಆತನ—ಅಭಿಮನ್ಯುವಿನ, ಬೀಸರ—ನಾಶ, ಅಡ್ಡಬೀಳುವ—ಎದುರುಬೀಳುವ, ಮಾಣಿಸಿದನು—ಅಡಗಿಸಿದನು.

೮೪. ಮರುಳು ಬಳಗವ—ಪಿಶಾಚಿಗಳ ಗುಂಪನ್ನು, ಅರುಣ ಜಲ—ರಕ್ತ, ಅರೆಯಟ್ಟಿದನು—ಹಿಂದಟ್ಟಿಸಿಕೊಂಡು ಹೋದನು, ಭಟರ—ಭಟರನ್ನು, ಕೇಣಿಯಕೊಂಡನು—(ಕೊಂಡುಕೊಂಡನು)—ನಾಶಮಾಡಿದನು.

೮೫. ಉರಗನ—ಹಾವನ್ನು, ಇಕ್ಕಡಿಗಾರ—ಎರಡು ತುಂಡಾಗಿ ಮಾಡಲು ಶಕ್ತಿಯುಳ್ಳವನು, ಹುಲ್ಲಿನ ಸರವಿ—ಹುಲ್ಲಿನಿಂದ ಮಾಡಿದ ಹಗ್ಗ, ಹಾಹೆ—ಬೊಂಬೆ.

೮೬. ಕೊರಲ—ಕೊರಲುಳ್ಳವರಾಗಿ, ತಲೆಗಿಂಬು—ತಲೆದಿಂಬು, ಸೀರೆ—ವಸ್ತ್ರ, ತಳಿತ—ಕಾಣಿಸುತ್ತಿರುವ, ಖಂಡ—ಮಾಂಸಖಂಡ, ದಂಷ್ಟ್ರ—ಕೋರೆಹಲ್ಲು, ಸಾಲ

ಬಲು ರಕುತದಲಿ ನೆನೆದ ಸೀರೆಯ ।
ತಳಿತ ಖಂಡದ ಬಿಗಿದ ಹುಬ್ಬಿನ ।
ಹೊಳೆವ ದಂಷ್ಟ್ರಾವಳಿಯೊಳೆಸೆದರು ಸಾಲ ಶಯನದಲಿ ||೮೬||

ಕೈಗೊರಲ ಕೋಳಾಹಳದ ಮುಂ ।
ಗೈಗಳೇರಿನ ಬಾದಣಂಗಳ ।
ಸುಯ್ಗಳರೆ ಮುರಳ್ದಾಲಿಗಳ ಬಿಡುಮಿದುಳ ಮೋರೆಗಳ ||
ಸುಯ್ಗಳಲಿ ಜೀವವ ಬಿಡುವ ಬಲು ।
ಗೈಗಳಾಹವ ಜವನ ಕೈಯಲಿ ।
ಸಾಗಲುರೆ ಹುಲುಸಾಯ್ತೆನಲು ರಂಜಿಸಿತು ರಣಭೂಮಿ ||೮೭||

ಇಕ್ಕಿದಿರಲಾ ರಾಜಪುತ್ರರ ।
ನಕ್ಕಟಕಟಾ ಸ್ವಾಮಿದ್ರೋಹರು ।
ಹೊಕ್ಕಮನೆ ಹಾಳಹುದಲಾ ದ್ರೋಣಾದಿ ನಾಯಕರು ||
ಹಕ್ಕಲಾಯಿತು ನಮ್ಮ ಬಲ ಶಿಶು ।
ಸಿಕ್ಕನೇಸೈ ಪಾಂಡವರ ಪು ।
ಣ್ಯಕ್ಕೆ ಸರಿಯಿಲ್ಲೆಂದು ಕೌರವರಾಯ ಖತಿಗೊಂಡ ||೮೮||

ಕುಲವ ನೋಡಿದರಿಲ್ಲ ತಮ್ಮಯ ।
ಬಲುಹ ನೋಡಿದರಿಲ್ಲ ಕದನದೊ ।
ಳುಳಿವ ನೋಡಿದಡಿಲ್ಲಲಾ ಸರಿಯೆಂಬ ಪಾತಕಿಯು ||

---

ಶಯನದಲಿ—ಸಾಲಾಗಿ ಮಲಗಿರುವುದರಿಂದ.

೮೭. ಕೈಗೊರಲ ಕೋಳಾಹಳ—ಕೈಗಳಿಂದಲೂ ಕೊರಳಿನಿಂದಲೂ ಮಾಡುವ ಶಬ್ದ, ಏರಿನ—ಗಾಯದ, ಬಾದಣ—ಕಂಡಿ, ಅರೆಮುರಳ್ದ—ಅರ್ಧಬಿಟ್ಟಿರುವ, ಬಿಡು ಮಿದುಳ—ಹೊರಕ್ಕೆ ಹೊರಟಿರುವ ಮಿದುಳುಳ್ಳ, ಬಲುಗೈಗಳ—ಶೂರರ, ಆಹವ—ಯುದ್ಧ, ಜವನ.......ಹುಲುಸಾಯ್ತು—ಯಮನಕೈಗೆ ಸೇರುವುದಕ್ಕೆ ಹೆಚ್ಚು ಫಲವನ್ನು ಕೊಟ್ಟಿತು.

೮೮. ಸ್ವಾಮಿದ್ರೋಹರು ದ್ರೋಣಾದಿನಾಯಕರು ರಾಜಪುತ್ರರನು ಇಕ್ಕಿದಿರಲಾ! ಹಕ್ಕಲು—ಹೊಲದಲ್ಲಿ ಅಲ್ಲಲ್ಲಿಬಿದ್ದಿರುವ ಆರಿಸಿಕೊಳ್ಳಬೇಕಾದ ಕಾಳು, ಶಿಶು—ಅಭಿಮನ್ಯು.

೮೯. ಕುಲವ . . . .ಲ್ಲಲಾ —ಅಭಿಮನ್ಯುವಿಗೆ ಯಾವುದರಲ್ಲಿಯೂ ಸಮಾನರೇ ಇಲ್ಲ, ಉಳಿವ—ಸಿಲ್ಲುವಿಕೆಯನ್ನು ಸರಿಯೆಂಬ ಪಾತಕಿಯು—ಸರಿಯೆನಿಸಿಕೊಂಡಿರುವ ಪಾಪಿಷ್ಠನು (ಎಂದರೆ, ಸರಿಯಾದವನೊಬ್ಬನೂ). ಓಲಿಯಕಾರರು—(ಶೂರರಲ್ಲಿ) ಮುಖ್ಯರು, ತೃಣ—ಹುಲ್ಲು

ಇಳೆಯೊಳೋಲೆಯ ಕಾರರೆಂಬರ |
ತಲೆಗೆ ತಂದಿರಿ ತೃಣವನೆನುತ |
ಗ್ಗಳೆಯರನು ಮೂದಲಿಸಿ ಬಯ್ದನು ಸುಯ್ದು ಕುರುರಾಯ ||೮೯||

ಕೇಳುತಿದ್ದರು ಪತಿಯ ಮೂದಲೆ |
ಗಾಳಿಯಲಿ ದಳ್ಳಿಸುವ ಧೈರ್ಯ |
ಜ್ವಾಲೆ ತಳಿತುದು ಖಾತಿಯಲಿ ಹೊಗರೇರಿದಾನನದ ||
ಆಳುತನಕುಬ್ಬೇರಿ ಕಡು ಹೀ |
ಹಾಳಿಕಾರರು ಕೈದುಗೊಂಡರು |
ಬಾಲಕನ ತರುಬಿದರು ದೊರೆಗಳು ಕೇಳು ಧೃತರಾಷ್ಟ್ರ ||೯೦||

---

ಕಡ್ಡಿ, ತಲೆಗೆ, ತೃಣವನು ತಂದನು—ಅಲ್ಪರೆಂದೆನಿಸಿದನು, ಸುಯ್ದು—ನಿಟ್ಟುಸಿರು ಬಿಟ್ಟು.

೯೦. ಪತಿಯ—ಕೌರವನ, ಮೂದಲೆ ಗಾಳಿಯಲಿ—ನಿಂದೆಯೆಂಬ ಗಾಳಿಯ ಸಹಾಯದಿಂದ, ದಳ್ಳಿಸುವ—ಉರಿವ, ಆಳುತನಕೆ—ಪರಾಕ್ರಮಕ್ಕೆ, ಹೀಹಾಳಿಕಾರರು—ಹಿಯ್ಯಾಳಿಸಲ್ಪಟ್ಟವರು.



---

KANNADA TEXTS FOR THE SCHOOL-LEAVING CERTIFICATE EXAMINATION OF 1923.

**Prose**—Padmini or the First Johar of Chitur, Price Re. 1-

**Poetry**—Kumara Vyasa's Kannada Bharata—
Drona Parva, Sandhis 5 & 6, Price As. 8

**Notes for the above Kannada Poetry, Price 12 As.**
**(Only a few copies are available)**

The above mentioned books are also prescribed for the VI F
of the High School Classes.

---

KANNADA TEXTS FOR IV AND V FORMS FOR 19

IV Form—**Prose**—Dharmasamrajyam, Price Re. 1-4-0
**Poetry**—Jaimini Bharata, Sandhis 18 and 19, A s.

V Form—**Prose**—Vangavijetha, Price Re. 1-8-0
**Poetry**—Torave Ramayana-Balakanda, Sandhis 1 a nd

*Sale Agents for the above books*—

**M. S. Rao & Co.,**

**Booksellers, Etc., Avenue Road,**
**BANGALORE CITY.**

---

ಕರ್ಣಾಟಕ ಸಾಹಿತ್ಯ ಪರಿಷತ್ತಿನವರಿಂದ ಪ್ರಕಟವಾಗಿರುವ
ಪುಸ್ತಕಗಳು

---

| | |
|---|---|
| ಪಂಪರಾಮಾಯಣ (ರಟ್ಟಿನ ಬೈಂಡು) | ೫—೦—೦ |
| ,, (ಕ್ಯಾಲಿಕೋ ಬೈಂಡು) | ೬—೦—೦ |
| ಪಂಪರಾಮಾಯಣದ ಕಥೆ (ವಚನ) | ೦—೧೨—೦ |
| ಪಂಪರಾಮಾಯಣದ ನಿಘಂಟು | ೦—೮—೦ |
| ಶಬ್ದಮಣಿದರ್ಪಣ | ೨—೮—೦ |
| ತೊರವೆರಾಮಾಯಣ ಬಾಲಕಾಂಡ ಸಂಧಿಗಳು ೧ರಿಂದ ೧೨ ಲಘು ಟಿಪ್ಪಣದೊಡನೆ | ೦—೧೪—೦ |
| ಕರ್ಣಾಟಕ ಭಾಷಾವಿಚಾರದ ಉಪನ್ಯಾಸ | ೦—೩—೦ |

ವಿಳಾಸ—ಎಂ. ಎಸ್. ರಾವ್ ಕಂಪೆನಿ,
ಪುಸ್ತಕ ವ್ಯಾಪಾರಿಗಳು, ಬೆಂಗಳೂರು ಸಿಟಿ.

